

**ವಿ. ಟಿ. ಕಾಳೆ**

ಕರ್ನಾಟಕ ಕಲಾ ಲೋಕದಲ್ಲಿ ವಿ.ಟಿ. ಕಾಳೆ ಎಂದೇ ಪ್ರಸಿದ್ಧರಾಗಿರುವ ಶ್ರೀ ವೆಂಕಟೇಶ ತುಳಜಾರಾಮ್ ಕಾಳೆಯವರ ಜನನ 1934. 1949 ರಿಂದ ಶ್ರೀ ಟಿ.ಪಿ. ಅಕ್ಕಿಯವರ ಮಾರ್ಗದರ್ಶನದಲ್ಲಿಉಚ್ಚ ಕಲಾ ಶಿಕ್ಷಣ ಪಡೆದ ಶ್ರೀಯುತರು 1953ರಲ್ಲಿ ಜೆ. ಜೆ. ಕಲಾ ಶಾಲೆಯಿಂದ ಡಿಪ್ಲೊಮಾ ಪದವಿ ಗಳಿಸಿಕೊಂಡರು. 1952 ರಿಂದ ಕೆಲಕಾಲ ಗದುಗಿನ ವಿಜಯ ಕಲಾ ಮಂದಿಕದಲ್ಲಿ ಶಿಕ್ಷಕ ವೃತ್ತಿಯನ್ನು ನಡೆಸಿದ ಶ್ರೀಯುತರ 1964ರಿಂದ 1992 ರವರೆಗೆ ಸೊಂಡೂರಿನ ಸಹ ವಸತಿ ಕಿರಿಯ ಮಹಾ ವಿದ್ಯಾಲಯದಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ಪ್ರಾಥಮಿಕ ಶಿಕ್ಷಣ ಪಠ್ಯವಸ್ತು ನವೀಕರಣ ಸಮಿತಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ಶ್ರೀಯುತರು 'ಕೇಫ' ಎಂಬ ಕೇಂದ್ರ ಸರ್ಕಾರ ಯೋಜನೆಯಲ್ಲಿ ಕರ್ನಾಟಕ ಸರ್ಕಾರದವರು ನೇಮಿಸಿದ ರಾಜ್ಯ ಸಲಹಾ ಸಮಿತಿಯಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಅನೇಕ ಕಲಾ ಶಿಬಿರಗಳಲ್ಲಿ ಭಾಗವಹಿಸಿದ ಶ್ರೀಯುತರಿಗೆ ಅಕಾಡೆಮಿಯ ಬಹುಮಾನ ಹಾಗೂ ಪ್ರಶಸ್ತಿಗಳು ಸಂದಿವೆ. ಸಧ್ಯ ಕರ್ನಾಟಕ ಲಲಿತಕಲಾ ಅಕಾಡೆಮಿಯ ಸಕ್ರಿಯ ಸದಸ್ಯರಾಗಿರುವ ಇವರು ಇಪ್ಪತ್ತಕ್ಕೂ ಹೆಚ್ಚಿನ ನಾಟಕಗಳನ್ನು ರಚಿಸಿ ನಿರ್ದೇಸಿದ್ದಾರೆ. ಸ್ವತಃ ನಟರೂ ಆದ ಇವರು ಅನೇಕ ನಾಟಕ ಹಾಗೂ ಚಲನಚಿತ್ರಗಳಲ್ಲಿ ನಟಿಸಿದ್ದಾರೆ.

ಇವರ ಕಲಾಕೃತಿಗಳು ಸೊಂಡೂರಿನ ಅರಮನೆಯಲ್ಲಿ, ಶ್ರೀ ಎಂ. ವೈ. ಘೋರ್ಪಡೆಯವರ ಸಂಗ್ರಹದಲ್ಲಿ ಹಾಗೂ ರಾಜ್ಯದ ಮತ್ತು ರಾಷ್ಟ್ರದ ಅನೇಕ ಕಡೆಗಳಲ್ಲದೆ ಪಾಕಿಸ್ಥಾನ, ಇಂಗ್ಲೆಂಡ್, ಅಮೇರಿಕದಲ್ಲಿಯೂ ಸಂಗ್ರಹವಾಗಿದೆ.

ಚಿತ್ರಕಲೆಯ ಬಗ್ಗೆ ಅನೇಕ ಲೇಖನಗಳನ್ನು ಬರೆದಿರುವ ಶ್ರೀಯುತರು ಅಕಾಡೆಮಿಗಾಗಿ ಹಿರಿಯ ಕಲಾವಿದ ಶ್ರೀ ಎಸ್. ಎಂ. ಪಂಡಿತ್ ಅವರ ಬಗ್ಗೆಯೂ ಪುಸ್ತಕವನ್ನು ಬರೆದಿದ್ದಾರೆ. 'ಚಿತ್ರಕಲಾ ಪರಿಚಯ' ಮುಂತಾಗಿ ಕಲಾ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಅನೇಕ ಪುಸ್ತಕಗಳ ರಚನೆ ಅಲ್ಲದೆ, ಸಾವಿರಾರು ಕಲಾಕೃತಿಗಳನ್ನು ರಚಿಸಿದ್ದಾರೆ.

ಕಲಾವಿದರ ಮಾಲೆ : 29



# ಶಿವಾನಂದ ಪಿ. ಅಕ್ಕಿ



ವಿ.ಟಿ. ಕಾಳೆ



ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು-560002

SHIVANANDA P. AKKI : A Biography by V. T. KALE, Published by K.MUKUNDAN, Registrar. Karnataka Lalithakala Academy, Nrupatunga Road, Bangalore-560002.
First Impression : 1994
Copies : 1000
Rs. 10.00
ಪ್ರಧಾನ ಸಂಪಾದಕರು
ಶ್ರೀ ಪಿ. ಆರ್. ತಿಪ್ಪೇಸ್ವಾಮಿ
ಪ್ರಕಟಣಾ ಸಮಿತಿ :
ಸರ್ವಶ್ರೀ ವಿ. ಟಿ. ಕಾಳೆ
ಡಾ ॥ ಬಿ. ಕೆ. ಹಿರೇಮಠ
ಬಿ. ಜಿ. ಮಹಮ್ಮದ್
ಅ. ಲ. ನರಸಿಂಹನ್
ಎ. ಕೆ. ಜೋಶಿ

Printed by: Brindavan Printers
and Publishers (P) Ltd, LalbaghFort Road,
Bangalore-560004

# ಮೊದಲ ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ರಾಜ್ಯದ ಹಿರಿಯ ಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸಿರುವುದು ಒಂದು. ಈ ಪುಸ್ತಕಗಳು ಆ ಹೆಸರಾಂತ ಕಲಾವಿದರ, ಅವರ ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ಬೆಳೆದು ಬಂದ ದಾರಿ ಮತ್ತು ಅವರ ಜೀವನ ಚರಿತ್ರೆಯ ತಿಳುವಳಿಕೆ ಉಂಟುಮಾಡಲು ಸಹಾಯವಾಗಬಲ್ಲದು.

ಈ ಯೋಜನೆಯಲ್ಲಿ ಈಗಾಗಲೇ ಇಪ್ಪತ್ತೆಂಟು ಸಚಿತ್ರ ಸುಂದರ ಹೊತ್ತಿಗೆಗಳು ಹೊರಬಂದಿವೆ. ಈಗ, ಅಂದರೆ 1993-94ನೇ ಸಾಲಿನಲ್ಲಿ ಹಲವಾರು ಹೊತ್ತಿಗೆಗಳು ಹೊರಬಂದಿದ್ದು, ಇನ್ನೂ ಒಂದೆರಡು ಸಿದ್ಧವಾಗುತ್ತಲಿವೆ. ಈಗ ಬಿಡುಗಡೆಯಾಗುತ್ತಿರುವ ಪುಸ್ತಕ ಹಿಂದಿನ ಮತ್ತು ಇಂದಿನ ಪೀಳಿಗೆಗೆ ಹಿರಿಯರಾದ ಶಿವಾನಂದ ಪಿ. ಅಕ್ಕಿ ಅವರನ್ನು ಕುರಿತದ್ದು. ಈ ಮಾಲೆ ಅತ್ಯಂತ ಜನಪ್ರಿಯವಾಗಿದ್ದು, ಈಗಾಗಲೇ ಕೆಲವು ಪುಸ್ತಕಗಳು ಪುನರ್ ಮುದ್ರಣವಾಗಿರುವುದು ಅವುಗಳ ಅವಶ್ಯಕತೆ, ಸಾರ್ಥಕತೆಗಳ ದ್ಯೋತಕ.

ಈ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರು ಕಲೆಯ ವಿಷಯ ಮತ್ತು ಆಯಾ ಕಲಾವಿದರ ಜೀವನದ ಬಗ್ಗೆ ಅರಿತವರು. ಇವುಗಳಿಗೆ ಆರಿಸಿರುವ ಚಿತ್ರಗಳೂ, ಆಯಾ ಕಲಾವಿದರ, ಅವರ ಕಲಾ ವಿಲಾಸದ ಪ್ರತೀಕ. ಅವು ಆಯಾ ಕಲಾವಿದರ, ಅವರ ಕಲಾ ಸಂಪತ್ತಿನ ವ್ಯಾಪ್ತಿಯನ್ನು ಅರಿಯಲು ಸಾಧಕವಾಗುವುದರಲ್ಲಿ ಸಂದೇಹವಿಲ್ಲ.

ಕಲಾವಿದರು, ಕಲಾ ರಸಿಕರು ಮತ್ತು ಸಾಹಿತ್ಯಾಭಿಮಾನಿಗಳು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

ಬೆಂಗಳೂರು

ಪಿ. ಆರ್. ತಿಪ್ಪೇಸ್ವಾಮಿ
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ



# ಶಿವಾನಂದ. ಪಿ. ಅಕ್ಕಿ

ಸಾವಿರದ ಒಂಭೈನೂರ ಅರವತ್ತೊಂದು. ಗದುಗಿನಲ್ಲಿ 43ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಅದ್ದೂರಿಯಾಗಿ ನಡೆಯುತ್ತಿತ್ತು. ಈ ಸಾಹಿತ್ಯ ಸಮ್ಮೇಳನದ ಅಂಗವಾಗಿ ಗದುಗಿನ ವಿಜಯ ಕಲಾಮಂದಿರವು ಚಿತ್ರಕಲಾ ಪ್ರದರ್ಶನವನ್ನು ಏರ್ಪಡಿಸಿತ್ತು. ವಿದ್ಯಾರ್ಥಿಗಳ, ಶಿಕ್ಷಕರ ಹಾಗೂ ಕೆಲವು ಹಿರಿಯ ಚಿತ್ರಕಲಾವಿದರ ಕಲಾಕೃತಿಗಳನ್ನು ಪ್ರದರ್ಶಿಸಲಾಗಿತ್ತು. ಕಿಕ್ಕಿರಿದ ಜನಸಂದಣಿ; ಸಾಹಿತ್ಯಾಸಕ್ತರ, ಬುದ್ಧಿಜೀವಿಗಳ ಓಡಾಟ. ಈ ಚಿತ್ರಕಲಾ ಪ್ರದರ್ಶನವು ಅಂದಿನ ಸಾಹಿತ್ಯ ಸಮ್ಮೇಳನದ ಮುಖ್ಯ ಆಕರ್ಷಣೆಯಾಗಿತ್ತು. ಆ ಜನಸಂದಣಿಯನ್ನು ಭೇದಿಸಿಕೊಂಡು ಸುಮಾರು ಅರವತ್ತು ವರ್ಷ ವಯಸ್ಸಿನ ವ್ಯಕ್ತಿಯೊಂದು ಪ್ರದರ್ಶನವನ್ನು ವೀಕ್ಷಿಸಲು ಮುನ್ನುಗಿದ್ದನ್ನು ನೋಡುತ್ತೇವೆ. ಮೂವತ್ತು ವರುಷಗಳಿಂದಲೂ ಬುದ್ಧಿ ಭ್ರಮಣೆಯಿಂದ ಬಳಲುತ್ತಿದ್ದ ಹಿರಿಯ ಕಲಾವಿದ ಶ್ರೀ ಶಿವಾನಂದ ಅಕ್ಕಿಯವರು!

ಶ್ರೀ ಶಿವಾನಂದ ಅಕ್ಕಿಯವರು - ಗದುಗಿನ ವಿಜಯ ಕಲಾಶಾಲೆಯ ಸಂಸ್ಥಾಪಕ ನಿರ್ದೇಶಕರೂ, ಕರ್ನಾಟಕ ಲಲಿತಕಲಾ ಅಕಾಡೆಮಿಯ ಮಾಜಿ ಅಧ್ಯಕ್ಷರೂ, ಹಿರಿಯ ಚಿತ್ರಕಲಾಶಿಕ್ಷಣವೇತ್ತರೂ ಆದ ಶ್ರೀ ಟಿ. ಪಿ. ಅಕ್ಕಿ ಅವರ ಅಣ್ಣಂದಿರು. ಮೂವತ್ತು ವರುಷಗಳಿಂದಲೂ ಬುದ್ಧಿ ಭ್ರಮಣೆಯಲ್ಲಿಯೇ ಬದುಕಿದ ಶ್ರೀ ಶಿವಾನಂದರು ಸಾವಿರದ ಒಂಭೈನೂರ ಅರವತ್ತೊಂದರಲ್ಲಿ ಇದ್ದಕ್ಕಿದ್ದಂತೆ-

-''ನಾನು ಉಪವಾಸ ವ್ರತಾಚರಣೆಯನ್ನು ಆಚರಿಸಬೇಕಿದೆ'' -ಎಂದು ಹೇಳಿದವರೇ ನೀರು ಸಹ ಮುಟ್ಟದೆ ಉಪವಾಸವನ್ನು ಪ್ರಾರಂಭಿಸಿಯೇ ಬಿಟ್ಟರು. ಒಂದು ತಿಂಗಳು ಮುಗಿಯುತ್ತ ಬಂದಿತು. ಎಂಭತ್ತು ವರ್ಷ ವಯಸ್ಸಿನ ತಾಯಿ ಮುದುಕಮ್ಮನವರೂ, ತಮ್ಮಂದಿರೂ ಚಡಪಡಿಸಹತ್ತಿದರು. ಶಿವಾನಂದನ ಆಯುಷ್ಯ ಮುಗಿಯಿತೆಂದೇ ಎಲ್ಲರೂ ಭಾವಿಸಿದ್ದರು. ಶಿವಾನಂದರು ಅಷ್ಟೊಂದು ಕೃಶರಾಗಿದ್ದರು. ಒಂದು ತಿಂಗಳು ಸಂಪೂರ್ಣ ಕಳೆಯಿತು. ಶಿವಾನಂದರ ಸೋದರ ಟಿ.ಪಿ. ಅಕ್ಕಿ ಅವರನ್ನು ಹತ್ತಿರ ಕರೆದು ಹೇಳಿದರು-''ಟಾತೂ, (ಅವರು ಟಿ.ಪಿ. ಅವರನ್ನು ಅಕ್ಕರೆಯಿಂದ ಹಾಗೇ ಸಂಬೋಧಿಸುತ್ತಿದ್ದರು) ಇಂದಿಗೆ ನನ್ನ ಉಪವಾಸ ವ್ರತ ಕೊನೆಗೊಂಡಿತು. ನನಗೆ ಲಿಂಬೆ ಹಣ್ಣಿನ ಶರಬತ್ತನ್ನು ಕುಡಿಸು''

ಟಿ. ಪಿ. ಅಕ್ಕಿ ಅಣ್ಣನಿಗೆ ಶರಬತ್ತನ್ನು ಕುಡಿಸಿದರು. ಶ್ರೀ ಶಿವಾನಂದರ ಉಪವಾಸ ಮುಗಿಯಿತು. ಅವರು ಎದ್ದು ಕುಳಿತರು, ತಮ್ಮನ್ನು ತಾವೇ ಒಂದು ಸಲ ನೋಡಿಕೊಂಡರು. ಮೂವತ್ತು ವರುಷಗಳ ಹಿಂದೆ ತಾವು ಬದುಕಿದ ರೀತಿ-ನೀತಿಗಳನ್ನು ನೆನಪಿಸಿಕೊಂಡರು. ತನ್ನ ಇರುವಿಕೆ, ಉಡುಗೆ ತೊಡುಗೆಗಳು ಅವರಿಗೆ ಅಸಹ್ಯವಾಗಿ ಕಂಡಿತು.

-''ಟಾತೂ, ಏನಿದು ನನ್ನ ಬಟ್ಟೆ-ಬರೆಗಳು !? ಇವೇ ಕೊಳಕು ವೇಷ ಭೂಷಣಗಳಲ್ಲಿ ನಾನಿರಬೇಕು? ಎಲ್ಲಿ ನನ್ನ ಸೂಟು? ಎಲ್ಲಿ ನನ್ನ ಬೋ?'' - ಎಂದು ಚಡಪಡಿಸಿದರು.

-''ಇಂದೇ ಈಗಲೇ ನಿಮಗೆ ಒಳ್ಳೆಯ ಬಟ್ಟೆಗಳನ್ನು ತರುತ್ತೇನೆ.''

ಶ್ರೀ ಟಿ.ಪಿ.ಯವರು ಒತ್ತಿ ಬರುತ್ತಿದ್ದ ದುಃಖವನ್ನು ಹತ್ತಿಕ್ಕಿ, ಕಣ್ಣಿನಲ್ಲಿ ಪುಟಿಯುತ್ತಿದ್ದ ಆನಂದಾಶ್ರುಗಳನ್ನು ಒರೆಸುತ್ತ ಹೇಳಿದರು. ಯಾವುದೇ

ಆರೈಕೆಯಿಂದಲೂ ಗುಣವಾಗದ ಅಣ್ಣನ ಭ್ರಮಿತ ಬುದ್ಧಿ ಇದ್ದಕ್ಕಿದ್ದಂತೆ ತನಗೆ ತಾನೇ ಗುಣವಾಯಿತು. ಇನ್ನು ನನ್ನ ಅಣ್ಣ ಹಿಂದಿನಂತೆಯೇ ವಿಜೃಂಭಿಸುತ್ತಾರೆ ಎಂದುಕೊಂಡರು. ತಾಯಿಯು, ಇನ್ನೊಬ್ಬ ತಮ್ಮ ಈಶ್ವರಪ್ಪ ಸಂತೋಷದಿಂದ ನಲಿದರು. ಮನದಲ್ಲಿಯೇ ಸಾವಿರಾರು ಬಾರಿ ಹರನ ಉಪಕೃತಿಯನ್ನು ಸ್ಮರಿಸಿಕೊಂಡರು. ಮನೆಯಲ್ಲಿ ಮತ್ತೆ ಸಂಭ್ರಮ ನಲಿದಾಡತೊಡಗಿತು. ಟಿ. ಪಿ. ಅಕ್ಕಿಯವರು ಅಣ್ಣನಿಗೆ ಒಳ್ಳೆಯ ಷರಟು, ಪಂಚೆ, ಕೋಟುಗಳನ್ನು ಕೊಡಿಸಿದರು. ಶ್ರೀ ಶಿವಾನಂದರು ತಮ್ಮನು ಕೊಡಿಸಿದ ಹೊಸಬಟ್ಟೆಗಳನ್ನು ಧರಿಸಿ, ಮೂವತ್ತು ವರುಷಗಳ ಹಿಂದಿನ ತಮ್ಮ ಹಳೆಯ ಗೆಳೆಯರನ್ನು ಹುಡುಕಿಕೊಂಡು ಗದುಗಿನ ತುಂಬಾ ಓಡಾಡಿದರು. ಕಾಲಚಕ್ರ ಬಹುದೂರ ಉರುಳಿದಂತೆ ಅವರಿಗೆ ಭಾಸವಾಯಿತು. ಅವರ ಹಳೆಯ ಸ್ನೇಹಿತರೆಲ್ಲ ಸತ್ತು ಸ್ವರ್ಗಸೇರಿ ಅದೆಷ್ಟೋ ದಿನಗಳುರುಳಿದ್ದವು. ಇದೇ ದಿನಗಳಲ್ಲಿಯೇ ಅವರು ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ಏರ್ಪಡಿಸಲಾದ ಚಿತ್ರಕಲಾಪ್ರದರ್ಶನವನ್ನು ವೀಕ್ಷಿಸಲು ಬಂದಿದ್ದರು. ಪ್ರದರ್ಶನದಲ್ಲಿ ಅವರು ಹಿಂದೆ ರಚಿಸಿದ ಕಲಾಕೃತಿಗಳನ್ನು ಪ್ರದರ್ಶಿಸಲಾಗಿತ್ತು. ಒಂದೊಂದೇ ಚಿತ್ರವನ್ನು ವೀಕ್ಷಿಸುತ್ತಾ ಅವರು –"ಈ ಚಿತ್ರವನ್ನು ಬಿಜಾಪುರದಲ್ಲಿಯೂ ಈ ಚಿತ್ರವನ್ನು ನಾಸಿಕದಲ್ಲಿಯೂ ಈ ಚಿತ್ರವನ್ನು ಶಿರಹಟ್ಟಿಯಲ್ಲಿಯೂ ಈ ಚಿತ್ರವನ್ನು ಗದುಗಿನಲ್ಲಿಯೂ ಈ ಚಿತ್ರವನ್ನು ದೆಹಲಿಯಲ್ಲಿಯೂ ಚಿತ್ರಿಸಿದ್ದೇನೆ."

–ಎಂದು ಮುಂತಾಗಿ ತಮ್ಮ "ಚಿತ್ರಕಲಾಸಮಯ"ವನ್ನು ಆಯಾ ಸ್ಮಾರಕಗಳ ಹೆಸರುಗಳನ್ನೂ ವಿವರಿಸಿದರು. ಇದೇ ಸ್ಥಿತಿಯಲ್ಲಿರುವಾಗ (ಸುಮಾರು ಏಳೆಂಟು ದಿನಗಳು ಮಾತ್ರ) ಅವರು ಮನೆಯಲ್ಲಿಯೇ ಕೆಲವು ರೇಖಾಚಿತ್ರಗಳನ್ನು ವಿಚಿತ್ರರೀತಿಯಲ್ಲಿ ಮೂವತ್ತು ವರ್ಷಗಳ ನಂತರ ಚಿತ್ರಿಸಿದ್ದರು. ಆ ರೇಖೆಗಳಿಗಿರಬೇಕಾದ ಅರ್ಥಮಾತ್ರ ನಿಗೂಢ; ಭ್ರಮಿತ ಮನಸ್ಸಿನ ವಿಚಿತ್ರ ಅಭಿವ್ಯಕ್ತಿ. ಅರ್ಥೈಸಲಾಗದ ಅರ್ಥಪೂರ್ಣ ರೇಖೆಗಳು.

–ವಿಧಿಲೀಲೆ ವಿಚಿತ್ರವೂ ವಿಪರ್ಯಾಸವೂ ಆದದ್ದು. ಅಥವಾ ನಮ್ಮ ನಾಡಿನ ದೌರ್ಭಾಗ್ಯ. ಮುಂದೆ ಕೆಲದಿನಗಳಲ್ಲಿ ಶ್ರೀ ಶಿವಾನಂದ ಮತ್ತೆ ಬುದ್ಧಿ ಭ್ರಮಣೆಗೊಳಗಾದರು; ಅವರ ಸಾವಿನ ಪರ್ಯಂತ ಮತ್ತೆ ಅವರ ಬುದ್ಧಿ ಚೇತರಿಸಿಕೊಳ್ಳಲಿಲ್ಲ. ಐವತ್ತು ಸಂವತ್ಸರಗಳಷ್ಟು ಸುದೀರ್ಘ ಕಾಲ ಬುದ್ಧಿ ಭ್ರಮಣೆಯಲ್ಲಿಯೇ ಕಳೆದು ಹೋಯಿತು. ಶಿವಾನಂದರು ತಮ್ಮ ಜೀವನ

ಪರ್ಯಂತ ಪದ್ಮಾಸನಾಸೀನರಾಗಿ ಎರಡೂ ಕೈಗಳನ್ನು ಮುಂದೆ ಹಿಡಿದು, ಒಂದು ಕೈಯ ತೋರುಬೆರಳು ಭ್ರೂಮಧ್ಯ ತಾಕುತ್ತಿರುವಂತೆ ಓಡಾಡಿಸುತ್ತ "ಪಿಟಿಎಸ್ಕ್ವಾಯ್, ಪಿಟಿಎಸ್ಕ್ವಾಯ್" -ಎಂಬ ಅವರದೇ ಆದ ತಾರಕಮಂತ್ರವೊಂದನ್ನು ಪಠಿಸುತ್ತ ಕಾಲನೊಂದಿಗೆ ಒಂದಾಗಿ ಹೋದ ಹಿರಿಯ ಜೀವ; ಮಹಾಚೇತನ. ಈ ಮಾತು ಅವರು ಚಿತ್ರಿಸಿ ನಮಗೆ ಬಳುವಳಿಯಾಗಿ ಬಿಟ್ಟುಹೋದ ನಿಸರ್ಗಚಿತ್ರ (Land Scape)ಗಳನ್ನು ಕಂಡವರಾರೂ ಅಲ್ಲಗಳೆಯಲು ಸಾಧ್ಯವಿಲ್ಲ.

ಗದಗ ತಾಲೂಕಿನ ಸೊರಟೂರು ಎಂಬ ಗ್ರಾಮದ ಶ್ರೀ ಪ್ರಭಪ್ಪ ಅಕ್ಕಿ ಅವರು ಲಕ್ಷ್ಮೇಶ್ವರದ ಸುಪ್ರಸಿದ್ಧ ವ್ಯಾಪಾರಿ ಮನೆತನದ ಶ್ರೀ ಅಣ್ಣಪ್ಪ ಭಾವಿಕಟ್ಟಿಯವರ ಸೋದರಿ ಮುದುಕಮ್ಮನ ಕೈಹಿಡಿದು, ಮಾವನ ಮನೆಯಲ್ಲಿಯೇ ಉಳಿದು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಲಕ್ಷ್ಮೇಶ್ವರದಲ್ಲಿಯೇ ಪೂರೈಸಿದರು. ಮುಂದೆ ಮ್ಯಾಟ್ರಿಕ್ (ಈಗಿನ ಎಸ್.ಎಸ್.ಎಲ್.ಸಿ) ಪರೀಕ್ಷೆಯನ್ನು ಮುಗಿಸಿಕೊಂಡು ಗದುಗಿನ ತಾಲೂಕು ಕಚೇರಿಯಲ್ಲಿ ಸಿರಸ್ತೇದಾರರಾಗಿ ಸೇವೆ ಸಲ್ಲಿಸತೊಡಗಿದರು. ಇದೇ ಶ್ರೀ ಪ್ರಭಪ್ಪ ಮತ್ತು ಶ್ರೀಮತಿ ಮುದುಕಮ್ಮ ದಂಪತಿಗಳ ಎರಡನೇ ಮಗನಾಗಿ ಶಿವಾನಂದ ಅಕ್ಕಿ ಸನ್ ಸಾವಿರದ ಒಂಭೈನೂರರ ಮಾರ್ಚ ಐದನೇ ದಿನಾಂಕದಂದು ಲಕ್ಷ್ಮೇಶ್ವರದಲ್ಲಿಯೇ ಜನ್ಮವೆತ್ತಿದರು.ಶ್ರೀ ಪ್ರಭಪ್ಪನವರಿಗೆ ಶಂಕರಪ್ಪ, ಶಿವಾನಂದ, ಟಾಕಪ್ಪ, ಈಶ್ವರಪ್ಪ ಎಂಬ ನಾಲ್ಕು ಜನ ಪುತ್ರರೂ ಚನ್ನಬಸಮ್ಮ ಎಂಬ ಪುತ್ರಿಯೂ ಜನಿಸಿ ಕುಟುಂಬ ಸಾಕಷ್ಟು ದೊಡ್ಡದಾಗಿತ್ತು. ಶ್ರೀ ಪ್ರಭಪ್ಪನವರಿಗಿದ್ದದ್ದು ಒಂದೇ ಆಸೆ-"ಮಕ್ಕಳು ಸುಶಿಕ್ಷಿತರಾಗಬೇಕು; ಗುಣವಂತರಾಗಬೇಕು."

ಸುಮಾರು ಹದಿನೈದು ವರುಷ ಸರಕಾರೀ ಸೇವೆ ಮಾಡಿ ದಣಿದ ಪ್ರಭಪ್ಪನವರಿಗೆ ಕಾಲನ ಕರೆಬಂದಿತು. ಶಿವನ ಪಾದಸೇರುವ ಮುಂಚೆ ತಮ್ಮ ಆತ್ಮೀಯ ಮಿತ್ರರೂ ನೆರೆಹೊರೆಯವರೂ ಆದ ಶ್ರೀ ಎಸ್. ಬಿ. ಹುಬಳಿ ಎಂಬುವವರನ್ನು ಕರೆದು ಹೇಳಿದರು -"ಹುಬಳಿ ಸಾಹೇಬರೇ, ನನ್ನ ಕಾಲಮುಗಿಯಿತು. ನಾನು ಇಂದೋ ನಾಳೆಯೋ ಶಿವನಪಾದ ಸೇರಬೇಕು; ಗಾಬರಿಯಾಗಬೇಡಿ ನಾನೇನು? ಎಲ್ಲರೂ ಒಂದುದಿನ ಶಿವನ ಪಾದವನ್ನು ಸೇರಲೇಬೇಕಲ್ಲವೇ? ನನ್ನ ಮಕ್ಕಳು ಅನಾಥರಾಗುತ್ತಾರೆಂದೇನೂ ನಾನು ಭಾವಿಸಿಲ್ಲ. ಏಕೆಂದರೆ ಅವರನ್ನು

ನೋಡಿಕೊಳ್ಳಲು ನೀವಿರುವಾಗ ನನಗಾವ ವ್ಯಥೆಯೂ ಇಲ್ಲವೆಂಬುದನ್ನು ಹೇಳಲಿಕ್ಕಾಗಿಯೆ ನಿಮ್ಮನ್ನು ಬರಹೇಳಿದೆ.''

-''ಪ್ರಭಪ್ಪನವರೇ, ನೀವು ನನ್ನನ್ನು ಕರೆದು ಹೇಳದಿದ್ದರೂ ಆತ್ಮೀಯ ಮಿತ್ರನೆನ್ನಿಸಿಕೊಂಡವನ ಜವಾಬ್ದಾರಿಯ ಅರಿವು ನನಗಿದೆ. ನಿಮ್ಮ ಕುಟುಂಬದ ಹೊಣೆಯು ನಿಮ್ಮ ಆಶೆ, ಅನಿಸಿಕೆಗಳಂತೆ-ನನ್ನ ಮೇಲಿರಲಿ.''

-ಕಂಠಬಿಗಿದು ಬರುತ್ತಿದ್ದರೂ ತಡೆದುಕೊಂಡು ಹುಬಳಿಸಾಹೇಬರು ಪ್ರಭಪ್ಪನವರನ್ನು ಸಂತೈಸಿದರು.

-''ಆಯ್ತು ನಾನಿನ್ನು ನಿಶ್ಚಿಂತ.''

-ಪ್ರಭಪ್ಪನವರು ಕಣ್ಣುಮುಚ್ಚಿದರು; ಮತ್ತೆ ತೆರೆಯಲಿಲ್ಲ. ಶ್ರೀ ಎಸ್. ಬಿ. ಹುಬಳಿಅವರು ಗದುಗಿನಲ್ಲಿಯೇ ಸರ್ಕಲ್ ಇನ್ಸಪೆಕ್ಟರರಾಗಿ ಸರಕಾರದ ಸೇವೆಯಲ್ಲಿದ್ದವರು. ಮೃತ ಸ್ನೇಹಿತ ಪ್ರಭಪ್ಪನವರಿಗೆ ಕೊಟ್ಟ ಮಾತನ್ನು ಅವರು ತಪ್ಪಲಿಲ್ಲ. ಪ್ರಭಪ್ಪನವರ ಕುಟುಂಬವನ್ನು ತಮ್ಮ ಸಹೋದರನ ಕುಟುಂಬವೆಂದೇ ಭಾವಿಸಿದರು. ತನ್ನಿಂದ ಎಲ್ಲ ಸಹಾಯ ಸಹಕಾರಗಳನ್ನೂ ಆ ಕುಟುಂಬಕ್ಕೆ ಸಲ್ಲಿಸಿದರು.

ತಂದೆಯವರ ಮರಣ ಸಂಭವಿಸಿದಾಗ ಶಿವಾನಂದರು ಕೇವಲ ಹತ್ತು ಹನ್ನೆರಡು ವರುಷದ ಬಾಲಕ. ಜೊತೆಗೆ ಅಣ್ಣ, ತನಗಿಂತ ಕಿರಿಯರಾದ ಇಬ್ಬರು ತಮ್ಮಂದಿರು ಹಾಗೂ ಒಬ್ಬ ಸೋದರಿ, ತಾಯಿ ಮುದುಕಮ್ಮ ಸುಶಿಕ್ಷಿತರು. ಆಗಿನ ಕಾಲವೆಂದರೆ ನಮ್ಮ ದೇಶದ ಹೆಣ್ಣುಮಕ್ಕಳು ಶಾಲೆಯ ಓನ್ನು ಕಲಿಯುತ್ತಾರೆಂದರೆ ''ಅಪಥ್ಯ ಸಂಪ್ರದಾಯಕ್ಕೆ ಹುಟ್ಟುಹಾಕುತ್ತಿದ್ದಾರೆ'' -ಎಂದೇ ಜನ ಭಾವಿಸುತ್ತಿದ್ದ ಕಾಲ. ಅಂಥ ಪರಿಸರದಲ್ಲಿ ಬೆಳೆದ ಮುದಕಮ್ಮ ಮುಲ್ಕೀ ಪರೀಕ್ಷೆ (ಈಗಿನ ಪ್ರಾಥಮಿಕ ಏಳನೇ ತರಗತಿ) ಪಾಸು ಮಾಡಿದ್ದರು. ''ಪತಿಯ ಮರಣಾನಂತರ ಮಕ್ಕಳ ಓದು ನಿಲ್ಲಬಾರದು; ಪತಿಯ ಆಸೆಯಂತೆ ಮಕ್ಕಳು ಸುಶಿಕ್ಷಿತರಾಗಲೇಬೇಕು. ಇದಕ್ಕಾಗಿ ಹೊಲ, ಮನೆ, ಒಡವೆ-ವಸ್ತುಗಳೆಲ್ಲ ಮಾರಾಟವಾಗಲಿ; ಮಕ್ಕಳು ಸುಶಿಕ್ಷಿತರಾಗಲಿ'' -ನಿರ್ಧಾರವನ್ನೇ ಕೈಗೊಂಡರು. ಮಕ್ಕಳ ಓದು ಸಾಗಿತು.

ಶಿವಾನಂದರು ಪ್ರಾಥಮಿಕ ಶಿಕ್ಷಣವನ್ನು ಪೂರೈಸಿ ಮಾಧ್ಯಮಿಕ ಶಿಕ್ಷಣಕ್ಕೆ ಕಾಲಿರಿಸಿದರು. ಆಗ ಗದುಗಿನಲ್ಲಿ ಮಾಧ್ಯಮಿಕ ಶಿಕ್ಷಣವೆಂದರೆ ಐದನೆಯ ತರಗತಿಯವರೆಗೆ ಅಂದರೆ ಈಗಿನ ಒಂಭತ್ತನೆಯ ತರಗತಿಯವರೆಗೆ ಮಾತ್ರ. ಶಿವಾನಂದರು ಒಂಭತ್ತನೆಯ ತರಗತಿಯನ್ನೂ ಪಾಸು ಮಾಡಿದರು. ಇದೇ ವೇಳೆಗೆ ಶ್ರೀ ಹುಬಳಿ ಅವರಿಗೆ ಸರಕಾರವು ಚಿಟ್ನೀಸ್ ಪದವಿ (ಸಿರಸ್ತೇದಾರ ಹುದ್ದೆಗಿಂತ ಮೇಲಿನ ಹುದ್ದೆ)ಗೆ ಬಡತಿ ನೀಡಿ ಅವರನ್ನು ಹುಬ್ಬಳ್ಳಿಗೆ ವರ್ಗಾಯಿಸಿತು. ಹುಬಳಿ ಸಾಹೇಬರು "ಅಕ್ಕಿಯವರ ಕುಟುಂಬವೂ ತಮ್ಮೊಂದಿಗೆ ಹುಬ್ಬಳ್ಳಿಗೆ ಬರಬೇಕು; ಅಲ್ಲಿಯೇ ವಾಸ್ತವ್ಯ ಮಾಡಬೇಕು" ಎಂದು ಬಯಸಿದರು. ಅವರ ಬಯಕೆಯಂತೆ ಅಕ್ಕಿ ಕುಟುಂಬ ಹುಬ್ಬಳ್ಳಿಗೆ ಸಾಗಿತು. ಹುಬ್ಬಳ್ಳಿಯ ಭೂಸ ಪೇಟೆಯಲ್ಲಿ ಮನೆಮಾಡಿ ವಾಸವಾಯಿತು. ಶಿವಾನಂದರೊಂದಿಗೆ ಎಲ್ಲ ಸೋದರರ ಮಾಧ್ಯಮಿಕ ಶಿಕ್ಷಣ ಹುಬ್ಬಳ್ಳಿಯ ಲ್ಯಾಮಿಂಗ್ಟನ್ ಹಾಯಸ್ಕೂಲಿನಲ್ಲಿ ಮುಂದುವರಿಯಿತು.

ಇಲ್ಲಿಂದಲೇ ಶ್ರೀ ಶಿವಾನಂದರು ಚಿತ್ರಕಲಾ ಪ್ರಪಂಚದಲ್ಲಿ ಕಾಲಿರಿಸಲು ಸಾಧ್ಯವಾಯಿತು. ಶಾಲೆಯಿಂದ ಮನೆಗೆ ಬರುವಾಗ, ಮನೆಯಿಂದ ಶಾಲೆಗೆ ಹೋಗುವಾಗ ದಾರಿಯಲ್ಲಿ ಕಾಣಬರುತ್ತಿದ್ದ ಸಾಲು ಮರಗಳನ್ನೂ, ದೂರದ ಗುಡ್ಡ-ಬೆಟ್ಟಗಳನ್ನೂ, ಮಂತ್ರ ಮುಗ್ಧನಂತೆ- ತಾಸುಗಟ್ಟಲೇ ನಿಂತು ನೋಡುತ್ತಿದ್ದ ಶಿವಾನಂದನ ಸೌಂದರ್ಯಾನ್ವೇಷಕ ಬುದ್ಧಿಯನ್ನು ಕಂಡುಕೊಂಡ ಅವr ಗುರುಗಳು ಚಿತ್ರಕಲೆಯನ್ನು ಕಲಿಯುವಂತೆ ಪ್ರೇರೇಪಿಸಿದರು. ರೋಗಿ ಬಯಸಿದ್ದೂ ಹಾಲೂ ಅನ್ನ; ವೈದ್ಯರು ಹೇಳಿದ್ದೂ ಹಾಲೂ ಅನ್ನ ಎಂಬತಾಯಿತು. ಮುಂಬಯಿ ಸರಕಾರದವರು ನಡೆಸುತ್ತಿದ್ದ ಆಗಿನ ಎಲಿಮೆಂಟರಿ ಮತ್ತು ಇಂಟರ್‌ಮಿಡಿಯೇಟ್ ಡ್ರಾಯಿಂಗ್ ಗ್ರೇಡ್ ಪರೀಕ್ಷೆಗಳಲ್ಲಿ ಶಿವಾನಂದ ಉತ್ತಮ ಶ್ರೇಣಿಯಲ್ಲಿ ಪಾಸಾದರು. ಶಿವಾನಂದರಲ್ಲಿ ಸುಪ್ತವಾಗಿದ್ದ ಕಲಾವಿದನ್ನು ಅವರ ಗುರುಗಳು, ಹಿರಿಯರು ಕಂಡುಕೊಂಡರು.

-"ಯೋಗ್ಯ ಚಿತ್ರಕಲಾ ಶಿಕ್ಷಣ ದೊರೆತರೆ ಶಿವಾನಂದನೊಬ್ಬ ಉತ್ತಮ ಕಲಾವಿದನಾಗಬಲ್ಲ" -ಎಂದೆಲ್ಲಾ ಮಾತನಾಡಿಕೊಂಡರು. ಈ ದಿಶೆಯಲ್ಲಿ ತಾಯಿ ಮುದುಕಮ್ಮ ಶ್ರೀ ಹುಬಳಿಯವರಲ್ಲಿ ಪ್ರಸ್ತಾಪವೆತ್ತಿದರು.

–"ಶಿವಾನಂದ ಒಳ್ಳೆಯ ಕಲಾವಿದನಾಗುತ್ತಾನೆಂದು ಎಲ್ಲರೂ ಹೇಳುತ್ತಾರೆ. ಅದೆಲ್ಲ ನನಗೆ ತಿಳಿಯದು. ಕಲಾಶಿಕ್ಷಣ ನೀಡಬಲ್ಲ ಕಲಾಶಾಲೆಗಳು ಮುಂಬಯಿಯನ್ನು ಬಿಟ್ಟರೆ ಇನ್ನೆಲ್ಲಿಯೂ ಇರುವುದಿಲ್ಲ; ಅವನನ್ನು ಮುಂಬಯಿ ಕಲಾಶಾಲೆಗೆ ಕಳಿಸಿರಿ ಎಂದು ಹೇಳುತ್ತಾರೆ. ಏನು ಮಾಡಬೇಕೆಂದು ನನಗೆ ತಿಳಿಯುತ್ತಿಲ್ಲ"

–"ಮುದುಕಮ್ಮನವರೇ, ಅವನು ಕಲಾವಿದನೇ ಆಗುವುದಿದ್ದರೆ ಆಗಲಿ ಅವನು ಮುಂಬಯಿಗೇ ಹೋಗಲಿ; ಅದಕ್ಕೇನು? ಯಾವುದೇ ದಿಶೆಯಲ್ಲಿ ಅವನ ಪ್ರಗತಿಯಾಗುವಂತಿದ್ದರೆ ನಮ್ಮಿಂದ ಯಾವುದೇ ಅಡ್ಡಿ ಆತಂಕಗಳು ಬರಬಾರದಲ್ಲವೇ"?

–" ಮುಂಬಯಿಯಲ್ಲಿದ್ದು ಕಲಿಯುವುದೆಂದರೆ ಅಪಾರ ಹಣ ಬೇಕು. ಹಣಕ್ಕಾಗಿ ನನ್ನ ಆಭರಣಗಳನ್ನು ಮಾರಬಲ್ಲೆ, ಹೊಲ-ಮನೆಗಳನ್ನೂ ಮಾರಬಲ್ಲೆ. ಅದೆಲ್ಲ ಅವನೊಬ್ಬನ ಖರ್ಚಿಗೇ ಮುಗಿದು ಹೋದರೆ ಇನ್ನುಳಿದ ಮಕ್ಕಳ ಶಿಕ್ಷಣಕ್ಕೇನು ಮಾಡುವುದು"

–ಮುದುಕಮ್ಮ ತಮಗಿರುವ ಆತಂಕವನ್ನು ಮನಬಿಚ್ಚಿ ತೋಡಿಕೊಂಡರು, ಹುಬಳಿ ಸಾಹೇಬರು ನಕ್ಕರು.

–"ಮುದುಕಮ್ಮನವರೇ, ಕೊಡುವ ದೇವರು ಬಡವನಲ್ಲ. ನಾವು ಪ್ರಾಮಾಣಿಕ ಪ್ರಯತ್ನ ಮಾಡದೇ ದೇವರು ತಾನಾಗಿಯೇ ಬಂದು ನಮಗೆ ಕೊಡುವುದಿಲ್ಲ. ಅದರೊಂದಿಗೆ ದೈವಬಲವೊಂದಿದ್ದರೆ ಸಾಕು ಎಂಬುದು ನಿಮಗೇನೂ ತಿಳಿಯದ ವಿಷಯವೇನಲ್ಲ. ಮಾಡೋಣ; ಪ್ರಯತ್ನ ಮಾಡೋಣ, ಮುಂಬಯಿಗೆ ಹೋಗಿದ್ದು ಕಲಿಯಲು ಶಿವಾನಂದ ಸಿದ್ಧನಾಗಿರುವನಲ್ಲವೇ?"

–"ಏನಾದರೂ ಪ್ರಯತ್ನ ಮಾಡಿ ನನ್ನನ್ನು ಮುಂಬಯಿಗೆ ಕಳಿಸಿರಿ. ನಾನು ಚಿತ್ರಕಲಾಭ್ಯಾಸವನ್ನು ಮಾಡಲೇಬೇಕು ಎಂದು ಒಂದೇ ಸಮನೇ ಪೀಡಿಸುತ್ತಿದ್ದಾನೆ."

–"ಹಾಗಿದ್ದರೆ ಅವಶ್ಯವಾಗಿ ಅವನನ್ನು ಕಳಿಸೋಣ. ಶಿರಸಂಗಿಯ ಲಿಂಗರಾಜ ದೇಸಾಯಿಯವರ ಹೆಸರಿನಲ್ಲಿ ಒಂದು ವಿಶ್ವಸ್ತ ಮಂಡಳಿಯನ್ನು ನೇಮಿಸಿ ಬಡ ಲಿಂಗಾಯತ ವಿದ್ಯಾರ್ಥಿಗಳ ಏಳಿಗೆಗಾಗಿ ಸ್ವತಃ ಲಿಂಗರಾಜ ದೇಸಾಯಿಯವರೇ

ದತ್ತಿಯೊಂದನ್ನು ಸ್ಥಾಪಿಸಿದ್ದಾರೆ. ಆ ಸಂಸ್ಥೆಯವರು ನಮ್ಮ ಶಿವಾನಂದನಿಗೆ ಖಂಡತವಾಗಿಯೂ ಸ್ಕಾಲರ್‌ಷಿಪ್ ಕೊಡುತ್ತಾರೆಂಬ ಭರವಸೆ ನನಗಿದೆ. ಅವರಿಗೆ ಸ್ಕಾಲರ್‌ಷಿಪ್ ಕೊಡಿಸುವ ಭಾರ ನನಗಿರಲಿ. ನೀವಿನ್ನು ನಿಶ್ಚಿಂತರಾಗಿ ಮಗನನ್ನು ಮುಂಬಯಿಗೆ ಕಳಿಸುವ ಸಿದ್ಧತೆ ಮಾಡಿಕೊಳ್ಳಿ."

-ಎಂದು ಹೇಳಿದ ಹುಬಳಿಯವರ ಮಾತಿನಿಂದ ಮುದಕಮ್ಮನವರ ಮನಸ್ಸಿನ ದುಗುಡ ಕಡಿಮೆಯಾಯಿತು.

ಶ್ರೀ ಹುಬಳಿಯವರ ಪ್ರಯತ್ನದಿಂದಾಗಿ ಶಿರಸಂಗಿ ಲಿಂಗರಾಜ ದತ್ತಿಯ ಸ್ಕಾಲರಷಿಪ್ ಶಿವಾನಂದರಿಗೆ ಲಭ್ಯವಾಯಿತು. ಶಿವಾನಂದರು ಈ ವೇಳೆಗಾಗಲೇ ಮ್ಯಾಟ್ರಿಕ್ ಪರೀಕ್ಷೆ ಪಾಸುಮಾಡಿ ಹೈಯಸ್ಕೂಲ ಶಿಕ್ಷಣವನ್ನು ಪೂರ್ತಿಗೊಳಿಸಿದ್ದರು.

-"ಸ್ಕಾಲರ್‌ಷಿಪ್ ಏನೋ ದೊರೆಯಿತು. ಈಗ ಮುಂಬಯಿಗೆ ಹೋಗಬೇಕು. ಮುಂಬಯಿಯ ಭಾಷೆ, ಸಂಸ್ಕೃತಿ ಎಲ್ಲ ಅಪರಿಚಿತ.. ಮುಂಬಯಿಯಂಥ ಬೃಹದ್ನಗರದಲ್ಲಿ ವಾಸಮಾಡವುದೆಲ್ಲಿ?" -ಎಂಬ ಸಮಸ್ಯೆ ಶಿವಾನಂದರನ್ನು ಕಾಡಹತ್ತಿತು.

ಆಗ ಮುಂಬಯಿಯಲ್ಲಿ ಕನ್ನಡಿಗರೇ ನಡೆಸುತ್ತಿರುವ ಗೌರೀಶಂಕರ ಫ್ಯಾಕ್ಟರಿ ಎಂಬುದೊಂದಿಗೆ ಅಲ್ಲದೇ ಕನ್ನಡಿಗರೇ ಆದ ಶ್ರೀ ತೋಟಪ್ಪ ಕೋಟ್ರಿ, ಶ್ರೀ ಸಿ.ಎಸ್. ಹುಲಕೋಟಿ, ಶ್ರೀ ಎ. ಸಿ. ಅಂಗಡಿ, ಶ್ರೀ ಹಮಸಾಗರ, ಶ್ರೀ ನವಲೆ ಮುಂತಾದವರು ಅಲ್ಲಿಯೇ ಕಾನೂನು ಅಭ್ಯಾಸ ಮಾಡುತ್ತಿದ್ದಾರೆಂದು ಶಿವಾನಂದರಿಗೆ ತಿಳಿಯಿತು. "ಅವರೆಲ್ಲರ ಸಹಾಯ ಸಹಕಾರಗಳು ನನಗೆ ಖಂಡಿತ ದೊರೆಯುತ್ತವೆ"-ಎಂಬ ನಿರ್ಧಾರಕ್ಕೆ ಬಂದರು. ಮುಂಬಯಿಗೆ ಹೋಗುವ ಸಕಲಸಿದ್ಧತೆಗಳನ್ನೂ ಮಾಡಿಕೊಂಡರು. ಹುಬ್ಬಳ್ಳಿಯ ಅನೇಕ ಜನಗಳು ಸಹಾಯ ನೀಡಿ ಶಿವಾನಂದರು ಮುಂಬಯಿಗೆ ಹೋಗುವಂತೆ ಪ್ರಚೋದಿಸಿದರು.

ಹೀಗೆ ಶಿವಾನಂದರ ಪ್ರಯಾಣ ಮುಂಬಯಿಗೆ ಸಾಗಿತು. ಹುಬ್ಬಳ್ಳಿಯ ಸುಪ್ರಸಿದ್ಧ ಕಲಾವಿದರಾಗಿದ್ದ ದಿವಂಗತ ಅಮೀನಸಾಬ ಕಮಡೊಳ್ಳಿಯವರೂ ಸಹ ಉಚ್ಚಕಲಾಶಿಕ್ಷಣಕ್ಕಾಗಿ ಮುಂಬಯಿಗೆ ಹೋಗಲು ಶ್ರೀ ಶಿವಾನಂದ

ಜತೆಗೂಡಿದರು. ಸಾವಿರದ ಒಂಭೈನೂರ ಹದಿನೇಳರಲ್ಲಿ ಮುಂಬಯಿಯ ಸರ್.ಜೆ. ಜೆ. ಸ್ಕೂಲ್ ಆಫ್ ಆರ್ಟನಲ್ಲಿ ತಮ್ಮ ಉಚ್ಚಕಲಾಶಿಕ್ಷಣಕ್ಕೆ ತೊಡಗಿದರು. ಉಚ್ಚಕಲಾಶಿಕ್ಷಣಕ್ಕೆಂದೇ ಪ್ರಪ್ರಥಮದಾಗಿ ಕರ್ನಾಟಕದಿಂದ ಮುಂಬಯಿಗೆ ಹೋದ ಶ್ರೇಯಸ್ಸು ಶ್ರೀ ಶಿವಾನಂದ ಅಕ್ಕಿ ಹಾಗೂ ಶ್ರೀ ಅಮಿನಸಾಬ ಕಮಡೊಳ್ಳಿ ಅವರಿಗೆ ಸಲ್ಲುತ್ತದೆ. ಅವರ ನಂತರ ಮುಂಬಯಿಯಲ್ಲಿ ಕಲಾಶಿಕ್ಷಣ ಪಡೆಯಲು-ಹಿಂದಿನ ಮುಂಬಯಿ ಪ್ರಾಂತದ ಡ್ರಾಯಿಂಗ್ ಇನ್ಸಪೆಕ್ಟರರಾಗಿದ್ದ ಶ್ರೀ ಡಿ.ಜಿ. ಬಡಿಗೇರ, ಮತ್ತು ಶ್ರೀ ಎಮ್. ಎ. ಚೆಟ್ಟಿ, ಶ್ರೀ ಜಿ. ಎಸ್. ದಂಡಾವತಿಮಠ , ಶ್ರೀ ಎಮ್. ವಿ. ಮಿಣಜಗಿ, ಶ್ರೀ ಸಿ.ವಿ. ಕಾರಡಗಿ ಮುಂತಾದವರು ಉತ್ತರ ಕರ್ನಾಟಕದಿಂದಲೂ ಶ್ರೀ ಎಮ್. ವೀರಪ್ಪ, ಶ್ರೀ ಸುಬ್ರಹ್ಮಣ್ಯ ರಾಜು, ಶ್ರೀ ಸೂಫಿ ಮುಂತಾದವರು ಹಳೆಯ ಮೈಸೂರು ಸಂಸ್ಥಾನದಿಂದಲೂ ಹೋಗಿ ಉಚ್ಚಕಲಾಶಿಕ್ಷಣವನ್ನು ಪಡೆದು ಕರ್ನಾಟಕಕ್ಕಷ್ಟೇ ಅಲ್ಲ ಇಡೀ ಭಾರತ ದೇಶಕ್ಕೇ ಕೀರ್ತಿತಂದ ಕಲಾವಿದರೆನ್ನಿಸಿಕೊಂಡವರು. ಅವರದೇ ಆದ ಸಾಂಪ್ರದಾಯ ನಿರ್ಮಾಪಕರೆನ್ನಿಸಿಕೊಂಡ ಸೃಜನಶೀಲ ದೈತ್ಯ ಕಲಾವಿದರು.

ಇಪ್ಪತ್ತನೇ ಶತಮಾನದ ಮೊದಲೆರಡು ದಶಕಗಳೆಂದರೆ ಭಾರತೀಯ ಚಿತ್ರಕಲಾ ಪರಂಪರೆಯ ಪುನರುಜ್ಜೀವನ ಕಾಲವೆಂದೇ ಹೇಳಬೇಕು. ಮೊಗಲ್ ಚಕ್ರಾಧಿಪತ್ಯದ ಕಾಲದಲ್ಲಿ ವಿಶಿಷ್ಟರೂಪದಲ್ಲಿ ಭಾರತೀಯ ಕಲೆ ಒಂದೊಮ್ಮೆ ಬೆಳಗಿತ್ತು. ಸುಮಾರು ಒಂದು ಶತಮಾನದ ವರೆಗೆ ಭಾರತೀಯ ಕಲಾಸಂಪ್ರದಾಯಕ್ಕೆ ಕರಾಳ ಛಾಯೆ ಮುಸುಕಿತ್ತೆಂದೇ ಹೇಳಬೇಕು. ಗುರುದೇವ ರವೀಂದ್ರನಾಥ ಠಾಗೋರ ಅವರ ಶಾಂತಿನಿಕೇತನ, ಮುಂಬಯಿಯ ಸರ್. ಜೆ. ಜೆ. ಕಲಾಶಾಲೆಗಳು ಈ ದಿಶೆಯಲ್ಲಿ ಚಿಂತಿಸಿ ಧೀಮಂತ ಹೆಜ್ಜೆಯನ್ನಿಟ್ಟ ಕಾಲ. ಅಬನೀಂದ್ರ ನಾಥ ಠಾಗೋರ, ಗ್ಲಾಡ್‌ಸ್ಟನ್ ಸೋಲೋಮನ್ ಮುಂತಾದ ಹಿರಿಯರು ಸಮೃದ್ಧವಾಗಿ ಬೆಳೆದು ಪ್ರದೀಪ್ತವಾಗಿ ಬೆಳಗಿದ ಭಾರತೀಯ ಕಲಾಪರಂಪರೆ ಮತ್ತೊಮ್ಮೆ ಉಜ್ವಲವಾಗಿ ಬೆಳಗ ಬೇಕು; ಅದಕ್ಕೆ ಹೊಸ ಸ್ವರೂಪವನ್ನು ಕೊಡಬೇಕು ಎಂದು ಚಿಂತಿಸುತ್ತಿದ್ದರು.

ಆಗ ಸರ್. ಜೆ.ಜೆ. ಕಲಾಶಾಲೆಯ ನಿರ್ದೇಶಕರಾಗಿದ್ದ ಕ್ಯಾಪ್ಟನ್ ಗ್ಲಾಡ್‌ಸ್ಟನ್ ಸೋಲೋಮನ್ (Gladston Soloman) ಅವರಿಗೆ ಭಾರತೀಯ ಚಿತ್ರಕಲಾ ವಿದ್ಯಾರ್ಥಿಗಳೆಂದರೆ ಅಪಾರ ಅಕ್ಕರೆ. ಅವರು ಭಾರತೀಯ

ಕಲಾವಿದ್ಯಾರ್ಥಿಗಳಿಗೆ ಅತ್ಯುತ್ತಮ ಕಲಾಶಿಕ್ಷಣದ ಅವಶ್ಯಕತೆ ಇದೆ ಎಂದು ತಿಳಿದವರು. ತಮ್ಮ ಕಲಾಶಾಲೆಯ ವಿದ್ಯಾರ್ಥಿಗಳನ್ನು ಆರಿಸಿ ಅವರನ್ನು ಪ್ರೋತ್ಸಾಹಿಸಿ ಹೆಚ್ಚಿನ ಕಲಾಭ್ಯಾಸಕ್ಕಾಗಿ ಲಂಡನ್ನಿನ ರಾಯಲ್ ಕಾಲೇಜ ಆಫ್ ಫಾಯಿನ್ ಆರ್ಟ್ಸ್ ಸಂಸ್ಥೆಗೂ ಕಳಿಸಿದುಂಟು. ಹೀಗೊಮ್ಮೆ ಅವರು ಶ್ರೀ ಡಿ. ಜಿ. ಬಡಿಗೇರ ಅವರನ್ನು ಲಂಡನ್ನಿಗೆ ಕಳಿಸಲು ನಿರ್ಧರಿಸಿದರು. ಆಗ ಸೊಲೋಮನ್ ಅವರ ಅನೇಕ ಸ್ನೇಹಿತರು ಅವರನ್ನು ಕೇಳಿದ್ದರು-

-''ಅಷ್ಟೊಂದು ದುಡ್ಡು ಖರ್ಚುಮಾಡಿ ಲಂಡನ್ನಿನಲ್ಲಿ ಕಲಿತು ಬಂದು ಡಿ. ಜಿ. ಬಡಿಗೇರ ಇಲ್ಲೇನು ಮಾಡುತ್ತಾರೆ? ಅವರಿಗೆ ಇಲ್ಲಿ ಯಾವ ನೌಕರಿ ಸಿಕ್ಕುತ್ತದೆ?''- ಎಂದು.

-''ಬಡಿಗೇರರಿಗೆ ಭಾರತದಲ್ಲಿ ಯಾವ ನೌಕರಿಯೂ ಸಿಕ್ಕದಿದ್ದ ಪಕ್ಷದಲ್ಲಿ ನಾನು ನನ್ನ ನೌಕರಿಯನ್ನು ತ್ಯಜಿಸಿ ಬಡಿಗೇರರಿಗೆ ಕೊಡಿಸಿ ಮರಳಿ ಲಂಡನ್ನಿಗೆ ಹೋಗುತ್ತೇನೆ. ನಾನಿಲ್ಲಿ ಮಾಡಬೇಕಾದ ಕೆಲಸವನ್ನೇ ಬಡಿಗೇರ ಮಾಡುತ್ತಾರೆ''- ಎಂದು ಉತ್ತರಿಸಿದ ಸೊಲೋಮನ್ ಅವರ ಹೃದಯ ಶ್ರೀಮಂತಿಕೆ, ಭಾರತೀಯ ಕಲಾವಿದ್ಯಾರ್ಥಿಗಳಲ್ಲಿ ಅವರಿಗಿದ್ದ ಭರವಸೆಗಳನ್ನು ಕಂಡು ಅವರ ಸ್ನೇಹಿತರು, ಸಂಶಯಿತರು ಬಾಯಿಮುಚ್ಚಿಕೊಂಡದ್ದುಂಟು.

ಇಂಥ ಘನವಂತ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡ ಸೊಲೋಮನ್ ಅವರ ಸನಿಹದಲ್ಲಿ ಅವರ ಆತ್ಮೀಯ ಶಿಷ್ಯನಾಗಿ ಶ್ರೀ ಶಿವಾನಂದ ಅಕ್ಕಿ ಒಬ್ಬ ಸೃಜನಶೀಲ ಕಲಾವಿದನಾಗಿ ರೂಪುಗೊಳ್ಳುತ್ತಿದ್ದರು. ಸಾಲದ್ದಕ್ಕೆ ಭಾರತದ ಶ್ರೇಷ್ಠ ಕಲಾವಿದರ ಸಾಲಿಗೆ ಸೇರಿದ ರಾವಬಹದ್ದೂರ್ ಎಮ್. ವಿ.ಧುರಂಧರ, ಟಾಸ್ಕರ್, ಚೂಡೇಕರ್, ಟ್ರಿನಿಡಾಡ್, ಮತ್ತು ಶ್ರೀ ಎ.ಎ. ಭೋಸಲೆ ಮುಂತಾದ ಅಧ್ವರ್ಯುಗಳು ಅವರಿಗೆ ಗುರುಗಳಾಗಿದ್ದರು. ಮುಂಬಯಿ ಪ್ರಾಂತದ ಆಗಿನ ಡ್ರಾಯಿಂಗ್ ಇನ್ಸ್‌ಪೆಕ್ಟರ್ ಆಗಿದ್ದ ಹೋಗರ್ಥ (Hogarth) ಅವರು ಶ್ರೀ ಶಿವಾನಂದ ಅಕ್ಕಿ ಅವರ ಕಲಾಶ್ರೇಷ್ಠತೆಯನ್ನು ಮೆಚ್ಚಿಕೊಂಡವರು; ಶಿವಾನಂದರಿಗೆ ಸದಾ ಪ್ರೋತ್ಸಾಹ ಉತ್ತೇಜನಗಳನ್ನು ಕೊಡುತ್ತಿದ್ದವರು.

ಶ್ರೀ ಶಿವಾನಂದ ಅಕ್ಕಿ ಅವರು ಕೇವಲ ಕಲಾಕೃತಿಗಳನ್ನು ರಚಿಸುತ್ತ ಸದಾ ಭಾವಲೀನರಾಗಿ ಮೂಲೆಯಲ್ಲಿ ಕುಳಿತುಕೊಳ್ಳುವ ಮುಗ್ಧ ಚಿತ್ರಕಾರರಾಗಿದ್ದಿಲ್ಲ.

ಅಚ್ಚುಕಟ್ಟಾದ ಉಡಿಗೆ-ತೊಡಿಗೆಗಳಿಂದಲೂ ಸದಾ ಕಂಠದಲ್ಲಿ ಶೋಭಿಸುವ ಬೋ ಒಂದನ್ನು ಧರಿಸಿ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತ ಸರ್ವರ ಮೆಚ್ಚುಗೆ ಮನ್ನಣೆಗಳಿಗೆ ಪಾತ್ರರಾಗಿದ್ದ ಸುಸಂಸ್ಕೃತ ವಿದ್ಯಾರ್ಥಿಯಾಗಿ ಪರಿವರ್ತನೆ ಗೊಂಡಿದ್ದರು. ಹಾಸ್ಯಪ್ರವೃತ್ತಿಯವರಾದ ಶ್ರೀ ಶಿವಾನಂದರು ಸದಾ ಕ್ರೀಡಾ ಚಟುವಕೆಗಳಲ್ಲಿಯೂ ಭಾಗವಹಿಸುತ್ತಿದ್ದರು. ಶಿವಾನಂದರಿಲ್ಲದ ಕ್ರೀಡೆ ಕ್ರೀಡೆಯೇ ಅಲ್ಲ ಎನ್ನುವಷ್ಟು ಮಟ್ಟಿಗೆ ಅವರು ಆಟ-ಪಾಠಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಿದ್ದರು.

ಶ್ರೀ ಶಿವಾನಂದ ಅಕ್ಕಿ ಅವರ ಸೃಜನಶೀಲತೆಯನ್ನು ಕಂಡು ಕೊಂಡಕ್ಯಾಪ್ಟನ್ ಗ್ಲ್ಯಾಡ್‌ಸ್ಟನ್ ಸೊಲೋಮನ್ ಅವರು ಅಭ್ಯಾಸಯಾತ್ರೆಗೆಂದು ಆರಿಸಿದ ವಿದ್ಯಾರ್ಥಿಗಳ ತಂಡದೊಂದಿಗೆ ಶಿವಾನಂದರನ್ನು ದೆಹಲಿಗೆ ಕರೆದೊಯ್ದರು. ಅಲ್ಲಿ ಶಿವಾನಂದರು ರಚಿಸಿದ ನಿಸರ್ಗದೃಶ್ಯ ಚಿತ್ರಕಲಾಕೃತಿಗಳು ನೋಡುಗರನ್ನು ಮಂತ್ರಮುಗ್ಧರನ್ನಾಗಿ ಮಾಡುವ ಅದ್ಭುತರಮ್ಯ ಕೃತಿಗಳಾಗಿದ್ದವು. ನಿಸರ್ಗ ಸೌಂದರ್ಯದೊಂದಿಗೆ ಸಂಪೂರ್ಣವಾಗಿ ಬೆರೆತುಹೋಗುವ ತಾದಾತ್ಮ್ಯತೆ ಶಿವಾನಂದರಿಗೆ ಬಾಲ್ಯಾವಸ್ಥೆಯಲ್ಲಿಯೇ ಮೈಗೂಡಿತ್ತು. ಸೊಲೋಮನ್ ಅವರು ಈ ಕಲಾಕೃತಿಗಳಿಂದ ಶಿಷ್ಯನಲ್ಲಿ ಹುದುಗಿದ್ದ ಅಸಾಮಾನ್ಯ ಕಲಾವಿದನನ್ನು ಕಂಡುಕೊಂಡರು; ಸಂತಸದಿಂದ ಬೀಗಿಕೊಂಡರು.

ಸಾವಿರದ ಒಂಭೈನೂರ ಇಪ್ಪತ್ನಾಲ್ಕರಲ್ಲಿ ಶ್ರೀ ಶಿವಾನಂದ ಅವರು ಸರ್. ಜೆ. ಜೆ. ಕಲಾಶಾಲೆಯ ಅತ್ಯುನ್ನತ ಪದವಿ ಪರೀಕ್ಷೆಯಾದ ಆರ್ಟ್‌ಮಾಸ್ಟರ್ ಪರೀಕ್ಷೆಯನ್ನು ಉಚ್ಚಶ್ರೇಣಿಯಲ್ಲಿ ಪಾಸು ಮಾಡಿದರು. ಶ್ರೀ ಶಿವಾನಂದರು ಐತಿಹಾಸಿಕ ಅವಶೇಷಗಳನ್ನು ಕಂಡಾಗ ಅವುಗಳ ಹಿಂದಿನ ವೈಭವ ಹೇಗಿದ್ದಿರಬೇಕೆಂದು ಊಹಿಸಿ ಮನದಲ್ಲಿಯೇ ನೊಂದುಕೊಳ್ಳುತ್ತಿದ್ದರು. ''ಈ ಅಳಿದುಳಿದ ಅವಶೇಷಗಳೂ ನಾಳೆ ಇಲ್ಲವಾಗಬಹುದು; ನಾಳಿನ ಜನಾಂಗ ಕೇವಲ ಚರಿತ್ರೆಯ ಪುಸ್ತಕಗಳನ್ನು ಓದವುದರಲ್ಲಿಯೇ ಹಿಂದಿನ ವೈಭವಪೂರ್ಣ ಕಟ್ಟಡಗಳನ್ನು ಕಲ್ಪನೆಯಿಂದಲೆ ಕಂಡುಕೊಳ್ಳಬಹುದಾದಂತಹ ದುರ್ದೆಶೆ ಬಂದರೂ ಆಶ್ಚರ್ಯಪಡಬೇಕಿಲ್ಲ. ಅದಕ್ಕಾಗಿ ಈಗಿರುವ ಸ್ಥಿತಿಯಲ್ಲಾದರೂ ಅವುಗಳ ಚಿತ್ರಣಗಳನ್ನು ಮಾಡಿಕೊಳ್ಳಬೇಕು'' ಎಂದುಕೊಂಡು ಅನೇಕ ಐತಿಹಾಸಿಕ ಅವಶೇಷಗಳನ್ನು ತಮ್ಮ ಜಲವರ್ಣಚಿತ್ರಗಳಲ್ಲಿ ಸೆರೆಹಿಡಿದಿಟ್ಟುಕೊಂಡರು. (ಈಗಿನಂತೆ ಆಗ ವರ್ಣಛಾಯಾ ಚಿತ್ರಗಳ ಕಲ್ಪನೆಯೂ ಇರಲಿಲ್ಲ) ನಾಸಿಕ,

ಗದಗ, ಲಕ್ಕುಂಡಿ, ದೆಹಲಿ, ಮಹಾಬಲೇಶ್ವರ, ಪಂಚಗಣಿ ಮುಂತಾದ ಐತಿಹಾಸಿಕ ಸ್ಥಳಗಳ ಚಿತ್ರಣಕ್ಕಾಗಿ ಭಾರತದ ಪೂರ್ವದಿಂದ ಪಶ್ಚಿಮ, ದಕ್ಷಿಣದಿಂದ ಉತ್ತರದುದ್ದಕ್ಕೂ ಸಂಚರಿಸಿ ಅಲ್ಲಿ ಅವರಿಗೆ ಕಂಡ ಅದ್ಭುತ ಸ್ಮಾರಕಗಳ ಚಿತ್ರಗಳನ್ನು ಚಿತ್ರಿಸಿದರು ಹೀಗೆ ಅವರು ಚಿತ್ರಿಸಿದ ಖಂಡಾಳಾ ಘಾಟ್‌ಗಳ ಸುಂದರ ನಿವೇಶನಗಳ ವರ್ಣಚಿತ್ರಗಳು ಅನ್ಯಾದೃಶವಾಗಿದ್ದವು.

ಮಹತ್ವಾಕಾಂಕ್ಷಿಯಾಗಿದ್ದ ಶ್ರೀ ಶಿವಾನಂದ ಅಕ್ಕಿಯವರು ಭಾರತದ ಚಿತ್ರಕಲಾ ಶಿಕ್ಷಣದ ಏಳಿಗೆಗಾಗಿ ಚಿಂತಿಸಿದರು. ಭಾರತೀಯ ಕಲಾವಿದ್ಯಾರ್ಥಿಗಳಿಗೆ ಯೋಗ್ಯ ಕಲಾಶಿಕ್ಷಣ ದೊರಕಬೇಕೆಂದು ಚಿಂತಿಸುವ ಹೊಣೆ ತಮ್ಮ ಗುರುಗಳಿಗೆ ಮಾತ್ರವಿದ್ದರೆ ಸಾಲದು;ಗುರುಗಳು ಮಾಡುವ ಕೆಲಸವನ್ನೇ ನಾನೂ ಮಾಡಬೇಕು; ನಾನು ಕಲಿತದ್ದನ್ನು ನಾಲ್ಕು ಜನ ವಿದ್ಯಾರ್ಥಿಗಳಿಗೆ ಧಾರೆಯೆರೆಯಬೇಕು. ''ಹನಿ ಹನಿ ಕೂಡಿದರೆ ಹಳ್ಳ; ತೆನೆ ತೆನೆ ಕೂಡಿದರೆ ರಾಶಿ'' ಎಂಬಂತೆ ಭಾರತದ ತುಂಬೆಲ್ಲ ಕಲಾಶಾಲೆಗಳು ಹುಟ್ಟಿಕೊಳ್ಳಬೇಕು. ಕಲಾವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಬೇಕು ಅಂದಾಗ ಮಾತ್ರ ಗುರುಗಳ ಕನಸು ನನಸಾದೀತು. ಎಂದುಕೊಂಡು ಮುಂಬಯಿಯಲ್ಲಿಯೆ ತಮ್ಮದೇ ಆದ ಕಲಾಶಾಲೆಯನ್ನು ತೆರೆಯಲು ನಿರ್ಧರಿಸಿಕೊಂಡರು; ಈ ಮೂಲಕ ಕಲಾಶಿಕ್ಷಣ ಕ್ಷೇತ್ರಕ್ಕೆ ತಮ್ಮ ಅಳಿಲು ಸೇವೆ ಸಲ್ಲಬೇಕು ಎಂದು ಕೊಂಡರು. ಈ ವಿಷಯವಾಗಿ ಗುರುಗಳಾದ ರಾವಬಹದ್ದೂರ್ ಧುರಂಧರ್ ಅವರಲ್ಲಿ ಪ್ರಸ್ತಾಪವೆತ್ತಿದರು. ಗುರುಗಳು ಬೇಡವೆನ್ನಲಿಲ್ಲ; ಬದಲಾಗಿ ಶಿವಾನಂದರ ಬೆನ್ನು ಚಪ್ಪರಿಸಿ, ತಮ್ಮ ಒಪ್ಪಿಗೆಯನ್ನು ಸೂಚಿಸಿದರು. ಅದರಂತೆ ಕಾರ್ಯೋನ್ಮುಖರಾಗಿ ಸಾವಿರದ ಒಂಭೈನೂರ ಇಪ್ಪತ್ನಾಲ್ಕರಲ್ಲಿಯೇ ಮುಂಬಯಿಯ ಗಾಂಧರ್ವ ಮಹಾವಿದ್ಯಾಲಯದ ಕಟ್ಟಡದಲ್ಲಿ ಕಲಾಶಾಲೆಯನ್ನು ಪ್ರಾರಂಭಿಸಿಯೇ ಬಿಟ್ಟರು. ಶಿಷ್ಯನ ಸಾಹಸ ಪ್ರವೃತ್ತಿಯನ್ನು ಮೆಚ್ಚಿಕೊಂಡ ರಾವಬಹದ್ದೂರ್ ಧುರಂಧರ ಅವರು ಶಿವಾನಂದರು ತೆರೆದ ಕಲಾಶಾಲೆಯ ಪ್ರಾರಂಭೋತ್ಸವಕ್ಕೆ ಸ್ವತಃ ಮುಖ್ಯ ಅತಿಥಿಯಾಗಿ ಬಂದು, ಕಲಾಶಾಲೆಯನ್ನು ಉದ್ಘಾಟಿಸಿ, ಶಿವಾನಂದರನ್ನು ಹರಸಿ ಹೋಗಿದ್ದರು. ಪಾಪ! ಧುರಂಧರ ಅವರು ಶಿಷ್ಯನ ಭವಿಷ್ಯ ಉಜ್ವಲವಾಗಬೇಕೆಂದರು. ವಿಧಿ ಶ್ರೀ ಧುರಂಧರ ಅವರನ್ನು ಅಣಕಿಸಿತು; ಅಪಹಾಸ್ಯಮಾಡಿತು; ಶಿವಾನಂದರ ಎಂಭತ್ತು ವರುಷಗಳ ಸುದೀರ್ಘ ಜೀವನದುದ್ದಕ್ಕೂ ವಿಕಟಾಟ್ಟಹಾಸದಿಂದ ನಕ್ಕು ನಲಿಯಿತು.



ಬೀದಿ ದೃಶ್ಯ - ತಾಣಾ
Street Scene - Thana

ಈ ವೇಳೆಗೆ ಶ್ರೀ ಶಿವಾನಂದರ ಅಣ್ಣ ಶ್ರೀ ಶಂಕರಪ್ಪನವರು ಭಾವಿಕಟ್ಟಿ ಮನೆತನಕ್ಕೆ ದತ್ತಕಕ್ಕೆ ಹೋದದ್ದರಿಂದಲೂ ತಾಯಿಯವರು ಹುಬ್ಬಳ್ಳಿಯನ್ನು ಬಿಟ್ಟು ಮರಳಿ ಗದುಗಿಗೇ ಹೋದದ್ದರಿಂದಲೂ ಮನೆತನದ ಸಂಪೂರ್ಣ ಹೊಣೆ ಶಿವಾನಂದರ ಮೇಲೆಯೇ ಬಿದ್ದಿತು. ಹುಬ್ಬಳ್ಳಿಯನ್ನು ಬಿಟ್ಟು ಗದುಗಿಗೆ ಬಂದ ತಾಯಿಯವರು ಗದುಗಿನ ಶ್ರೀ ಗುರಪ್ಪಣ್ಣ ಆಲೂರ ಅವರ ಜಿನ್ನಿನಲ್ಲಿಯೇ ಮನೆ ಮಾಡಿಕೊಂಡಿದ್ದರು. ಶ್ರೀ ಗುರಪ್ಪಣ್ಣನವರು ಗದುಗಿನಲ್ಲಿ ಪ್ರತಿಷ್ಠಿತ ಪ್ರಭಾವೀ ವ್ಯಕ್ತಿಯಾಗಿದ್ದರು.

–''ಮುದುಕಮ್ಮನವರೇ, ನಾನು ನಿಮಗೊಂದು ಕೆಲಸ ನೋಡಿದ್ದೇನೆ. ಪ್ರಾಥಮಿಕ ಶಾಲೆಯಲ್ಲಿ ಹೆಡ್‌ಮಿಸ್ಟ್ರೆಸ್ ಕೆಲಸ: ನಿಮಗೆ ಒಪ್ಪಿಗೆಯಾದರೆ ನೀವು ಆ ಕೆಲಸಕ್ಕೆ ಸೇರಬಹುದು; ಅದರಿಂದ ನಿಮಗೆ ಅನುಕೂಲವೂ ಆದೀತು''

–ಮುದುಕಮ್ಮನವರ ಆಗಿನ ಸ್ಥಿತಿಯನ್ನು ಕಂಡು ಗುರಪ್ಪಣ್ಣನವರು ಅವರಿಗಾಗಿ ಪ್ರಾಥಮಿಕ ಶಾಲೆಯ ಹೆಡ್‌ಮಿಸ್ಟ್ರೆಸ್ ಕೆಲಸವನ್ನು ಹುಡುಕಿ ಹೇಳಿದರು.

–''ಗುರಪ್ಪಣ್ಣನವರೇ, ನಮ್ಮ ಪರಿಸ್ಥಿತಿಯನ್ನು ಕಂಡುಕನಿಕರಿಸುವ ನಿಮ್ಮ ಉದಾತ್ತ ವ್ಯಕ್ತಿತ್ವವನ್ನು ಕಂಡು ನಿಮಗೆ ಯಾವರೀತಿಯಲ್ಲಿ ಕೃತಜ್ಞತೆಗಳನ್ನು ಸಲ್ಲಿಸಬೇಕೋ ನನಗೆ ತಿಳಿಯುತ್ತಿಲ್ಲ. ಆಗಲಿ ನನ್ನ ಮಗನೊಬ್ಬ ಮುಂಬಯಿಯಲ್ಲಿದ್ದಾನೆ. ಆರ್ಟ್ ಮಾಸ್ಟರ್ ಪರೀಕ್ಷೆ ಪಾಸುಮಾಡಿ ಮುಂಬಯಿಯಲ್ಲಿಯೇ ಒಂದು ಕಲಾಶಾಲೆಯನ್ನು ನಡೆಸುತ್ತಿದ್ದಾನೆ. ಯಾವುದಕ್ಕೂ ನಾನು ಮಗನನ್ನೊಂದು ಮಾತು ಕೇಳಿ ನಿಮಗೆ ತಿಳಿಸುತ್ತೇನೆ.''

–ಮಗ ಶಿವಾನಂದನಾಗಲೀ ಇನ್ನುಳಿದ ಮಕ್ಕಳಾಗಲೀ ತಾನು ನೌಕರಿ ಮಾಡುವುದನ್ನು ಖಂಡಿತವಾಗಿಯೂ ಒಪ್ಪಿಕೊಳ್ಳಲಾರರೆಂದೇ ಅನುಮಾನಿಸಿದ ಮುದುಕಮ್ಮನವರು ಗುರಪ್ಪಣ್ಣನವರಿಗೆ ಹಾಗೆ ಹೇಳಿರಬೇಕು. ಮುದುಕಮ್ಮನ ಅನಿಸಿಕೆ ಸುಳ್ಳಾಗಲಿಲ್ಲ. ಮುಂಬಯಿಯಲ್ಲಿದ್ದ ಮಗ ಶಿವಾನಂದನೂ ಒಪ್ಪಲಿಲ್ಲ; ಉಳಿದ ಮಕ್ಕಳು ಒಪ್ಪಲಿಲ್ಲ. ಹೀಗಾಗಿ ಮುದುಕಮ್ಮ ಹೆಡ್‌ಮಿಸ್ಟ್ರೆಸ್ ಆಗಲಿಲ್ಲ.

ಮನೆತನದ ಭಾರದೊಂದಿಗೆ ಕಲಾಶಾಲೆಯನ್ನೂ ನಡೆಸುತ್ತಿದ್ದ ಶಿವಾನಂದ ಅಕ್ಕಿ, ಕಲಾಕೃತಿಗಳ ರಚನೆಯನ್ನು ಕೈಬಿಡಲಿಲ್ಲ. ಸುಂದರವಾದ ಐತಿಹಾಸಿಕ

ಅವಶೇಷದ ಅಸ್ತಿತ್ವ ಇಂಥಲ್ಲಿ ಇದೆ ಎಂದು ತಿಳಿದರೆ ಸಾಕು; ಅದೆಷ್ಟೇ ದೂರವಿರಲಿ, ಎಷ್ಟೇ ವೆಚ್ಚವಾಗಲಿ, ಅಲ್ಲಿಗೇ ಹೋಗಿ ಅದರೆದುರು ಕುಳಿತು, ಅದನ್ನು ಚಿತ್ರಿಸಿಕೊಂಡು ಬರುವ ಜಾಯಮಾನದವರು ಶಿವಾನಂದ. ಹಾಗೆ ಅವರು ಚಿತ್ರಿಸಿಕೊಂಡು ಬಂದ ಚಿತ್ರ ಅವರ ಬಳಿ ಬಹಳ ಕಾಲವಿರುತ್ತಿರಲಿಲ್ಲ. ಕೂಡಲೇ ಮಾರಾಟವಾಗುತ್ತಿತ್ತು. ಶಿವಾನಂದ ಅವರು ಮುಂಬಯಿಯ ಚೌಪಾಟಿಯಲ್ಲಿ ಕುಳಿತು ಸಾಗರದ ಗಭೀರ' ಭೀಕರಸೌಂದರ್ಯ ದೃಶ್ಯವನ್ನು ಜಲವರ್ಣಗಳಲ್ಲಿ ಚಿತ್ರಿಸುತ್ತಿದ್ದರೆ, ನೋಡುಗರ ಕಣ್ಣಿಗೆ ಅದೊಂದು ಹಬ್ಬ; ಸಂಭ್ರಮ. ಅವರ ಸುತ್ತಲೂ ನೂರಾರು ಜನ ಸೇರಿ ಅವರ ಕೈಚಳಕ ನೋಡಲು ಚಕಿತಚಿತ್ತರಾಗಿ ಶಿವಾನಂದರ ಚಿತ್ರಣಕಾರ್ಯ ಮುಗಿಯುವವರೆಗೂ ನಿಂತುಕೊಳ್ಳುತ್ತಿದ್ದರಲ್ಲದೇ ಶಿವಾನಂದರು ಹೇಳಿದಷ್ಟು ಹಣವನ್ನು ಕೊಟ್ಟು ಸ್ಥಳದಲ್ಲಿಯೇ ಅದನ್ನು ಕೊಂಡುಕೊಂಡು ಹರ್ಷ ಚಿತ್ತರಾಗಿ ಮನೆಗೆ ಹೋಗುತ್ತಿದ್ದರು. ಹೀಗೆ ಅವರು ಚಿತ್ರಿಸಿದ್ದ "ಸಮುದ್ರ ದೃಶ್ಯ" (Seascapes)ಗಳು ಸಾವಿರಾರು. ಸಮುದ್ರದ ದಂಡೆಯಲ್ಲಿಯೇ ಕುಳಿತು ಚಿತ್ರಿಸಿದ ಚಿತ್ರಗಳನ್ನು ಮಾರಾಟ ಮಾಡಿ ಪ್ರತಿ ತಿಂಗಳೂ ಮೂರು ನೂರರಿಂದ ನಾಲ್ಕು ನೂರು ರೂಪಾಯಿಗಳವರೆಗೆ ಅವರು ಆಗಿನ ದಿನಗಳಲ್ಲಿಯೇ ಸಂಪಾದನೆ ಮಾಡಿದ್ದುಂಟು. ಅವರ ಕಲಾಶಾಲೆ ಅವರ ಮನೋವೃತ್ತಿಯಾಗಿತ್ತಲ್ಲದೇ ಸಂಪಾದನಾ ಮೂಲವಾಗಿರಲಿಲ್ಲ.

ತಾವೇ ಚಿತ್ರಿಸಿದ ವರ್ಣಚಿತ್ರಕಲಾಕೃತಿಗಳಲ್ಲಿ ಶ್ರೀ ಶಿವಾನಂದ ಅಕ್ಕಿ ಅವರಿಗೆ ಅಪಾರವಾದ ಭರವಸೆ ಇತ್ತು. ತಾನು ಚಿತ್ರಿಸಿದ ಚಿತ್ರಗಳನ್ನು ಭಾರತದ ಜನತೆಯೆಲ್ಲಾ ನೋಡಬೇಕು; ತನ್ನನ್ನು ಮೆಚ್ಚಿಕೊಳ್ಳಬೇಕು ಎಂದು ಬಯಸುವ ಪ್ರತಿ ಭಾರತೀಯ ಕಲಾವಿದನಲ್ಲಿರುವ ಆಶೆ-ಅಭಿಲಾಷೆಗಳಿಂದ ಶಿವಾನಂದರು ಹೊರತಾಗಿರಲಿಲ್ಲ. ಮುಂಬಯಿ, ಕಲಕತ್ತಾ, ಪತಿಯಾಳಾ, ಸಿಮ್ಲಾ, ನವದೆಹಲಿ, ಪುಣೆ ಮುಂತಾದ ಕಡೆಗಳಲ್ಲೆಲ್ಲಾ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿದರು. ಸಿದ್ಧಹಸ್ತ ಚಿತ್ರಕಲಾವಿದನೆಂದು ಭಾರತದ ಎಲ್ಲೆಡೆ ಖ್ಯಾತಿಯನ್ನು ಗಳಿಸಿದರು. ಪತಿಯಾಳಾದಲ್ಲಿ ಪ್ರದರ್ಶಿಸಿದ ಅವರ ಕಲಾಕೃತಿಗಳಿಗೆ ಪ್ರಶಂಸೆ, ಪುರಸ್ಕಾರ, ಹಾಗೂ ಬಹುಮಾನಗಳ ಸುರಿಮಳೆಯೇ ಆಯಿತು. ಅವರು ಚಿತ್ರಿಸಿದ ಬಿಜಾಪುರದ "ತಿಂಗಳ ಬೆಳಕಿನಲ್ಲಿ ಗೋಳಗುಮ್ಮಟ","ಇಬ್ರಾಹಿಮ ರೋಜಾ", "ಗದುಗಿನ ಸೋಮೇಶ್ವರ ದೇವಸ್ಥಾನ" ಮುಂತಾದ

ಕಲಾಕೃತಿಗಳನ್ನು ನೋಡಿ ತುಂಬಾ ಮೆಚ್ಚಿಕೊಂಡು ಪತಿಯಾಳಾ ಮಹಾರಾಜರು ಅವುಗಳನ್ನು ಖರೀದಿಸಿ ಶಿವಾನಂದರ ಚಿತ್ರಕಲಾ ಚೈತನ್ಯವನ್ನು ಪ್ರೋತ್ಸಾಹಿಸಿದರು.

ಹೀಗೊಮ್ಮೆ ಮುಂಬಯಿಯ ಆರ್ಟ್ ಸೊಸೈಟಿಯಲ್ಲಿ ಪ್ರದರ್ಶಿಸಲಾದ ನಿಸರ್ಗದೃಶ್ಯ ಚಿತ್ರವೊಂದನ್ನು ವೀಕ್ಷಿಸಿದ ವೀಕ್ಷಕರು ಅದನ್ನು ಖರೀದಿಸಲು ಪೈಪೋಟಿಯನ್ನೇ ನಡೆಸಿದರು. ಆ ಕಲಾಭಿಮಾನಿಗಳನ್ನು ಸಂತೈಸಲು ಶಿವಾನಂದರು ಅದೇ ಚಿತ್ರದ ಮತ್ತೈದು ಪ್ರತಿಗಳನ್ನು ಮಾಡಿಕೊಟ್ಟು ಅವರನ್ನು ಸಮಾಧಾನ ಪಡಿಸಬೇಕಾಯಿತು.ಈಗ ಆ ಕಲಾವಿದನೂ ಇಲ್ಲ; ಆ ಕಲಾಪ್ರೇಮಿಗಳೂ ಇಲ್ಲ.

ಹೌದು; ಶ್ರೀ ಶಿವಾನಂದ ಅಕ್ಕಿಯವರ ಕೈಚಳಕ, ವರ್ಣಮಾಧುರ್ಯಗಳೇ ಹಾಗೆ. ಜಲವರ್ಣ ಮಾಧ್ಯಮದಲ್ಲಿ ಅಸಾಧಾರಣವಾದ ಚಮತ್ಕೃತಿಯನ್ನು ಸೃಷ್ಟಿಸಬಲ್ಲ ಮೋಡಿಕಾರ ಶ್ರೀ ಶಿವಾನಂದ. ಚಿತ್ರರಚನಾಶೈಲಿಯಲ್ಲಿ ತಮ್ಮದೇ ಆದ ಪ್ರಾಮಾಣಿಕ ತಂತ್ರಗಳನ್ನು ರೂಢಿಸಿಕೊಂಡ ಶಿವಾನಂದ ಕೇವಲ ತಂತ್ರಜ್ಞರಾಗಿರಲಿಲ್ಲ. ಸತ್ಯಕ್ಕೆ ಹತ್ತಿರವಾದ, ಕಣ್ಣಿಗೆ ಕಂಡದ್ದನ್ನು ಕಂಡಂತೆಯೇ ತಮ್ಮ ವರ್ಣಚಿತ್ರಗಳಲ್ಲಿ ಸೆರೆಹಿಡಿಯುವ ಪ್ರಾಮಾಣಿಕ ಚಿತ್ರಕಲಾವಿದರಾಗಿದ್ದರು.

ಆಗ ಡಾಡಾಯಿಜಂ, ಇಂಪ್ರೆಶನಿಜಂ, ಫಾವಿಜಂ, ಎಕ್ಸಪೆಶನಿಜಂ, ಕ್ಯೂಬಿಜಂ, ರಿಯಾಲಿಜಂ, ಸರ್‍ರಿಯಾಲಿಜಂ ಮುಂತಾದ ನವ್ಯಶೈಲಿಗಳು ಭಾರತವನ್ನು ಪ್ರವೇಶಿಸಿಲಿರಲಿಲ್ಲ. ಅದು ಪರಂಪರಾನುಗತ ಶೈಲಿಯನ್ನೇ ಹೊಸ ದೃಷ್ಟಿ ಕೋನದಿಂದ ನೋಡುವ ಹೊಸ ಪರಂಪರೆಯ ಶೈಶವಾವಸ್ಥೆಯ ಕಾಲ. "ಸುಮಾರು ಶತಮಾನಗಳಿಂದ ಕಣ್ಮರೆಯಾಗಿ ಕತ್ತಲೆಯಲ್ಲಿ ಮುಚ್ಚಿಹೋದ ಭಾರತೀಯ ಶ್ರೀಮಂತವಾದ ಕಲಾಪ್ರಪಂಚ ಮತ್ತೊಮ್ಮೆ ಬೆಳಕಿನಲ್ಲಿ ಪ್ರಜ್ವಲಿಸಬೇಕು. ಭಾರತೀಯ ಕಲಾವಿದರ ಆಧ್ಯಾತ್ಮಿಕ ಸತ್ಯ ಸೌಂದರ್ಯಾನ್ವೇಷಣೆಯ ಅಭೀಪ್ಸೆಯ ಆದರ್ಶಗಳನ್ನು ಪ್ರಪಂಚ ಮತ್ತೊಮ್ಮೆ ಕಂಡು ಆನಂದಿಸಬೇಕು." - ಎಂಬುದೊಂದೇ ಆಗಿನ ಕಲಾ ಶಾಲೆಗಳ, ಕಲಾಗುರುಗಳ ಅಭೀಷ್ಟವಾಗಿತ್ತು. ಕಲಕತ್ತೆಯ ಶಾಂತಿನಿಕೇತನ ಕಲಾಶಾಲೆಯ ಪ್ರಾಚಾರ್ಯರಾಗಿದ್ದ ಶ್ರೀ ಅಬನೀಂದ್ರನಾಥ ಟಾಗೋರರಾಗಲೀ, ಅವರ ಶಿಷ್ಯಂದಿರಾದ ಶ್ರೀನಂದಲಾಲ ಬೋಸ, ಶ್ರೀ ಅಬ್ದುಲ್ ರಹಮಾನ್‌ಚುಗ್ತಾಯಿ,

ಶ್ರೀ ಕ್ಷಿತೀಂದ್ರನಾಥ ಮಜುಮದಾರ, ಶ್ರೀ ಕೆ. ವೆಂಕಟಪ್ಪ ಮುಂತಾದವರಾಗಲೀ ಮಾಡಿದುದೂ ಸಾಧಿಸಿದುದೂ ಅದನ್ನೇ. ಮುಂಬಯಿ ಕಲಾಶಾಲೆಯ ಗ್ಲಾಡ್‌ಸ್ಟನ್ ಸೋಲೋಮನ್‌ರಾದಿಯಾಗಿ ಗುರುವರ್ಗದವರಾಗಲೀ ಅವರ ಶಿಷ್ಯಂದಿರಾದ ಶ್ರೀ ಜಗನ್ನಾಥ ಅಹಿವಾಸಿ, ಶ್ರೀ ಎಂ. ಆರ್. ಅಚರೇಕರ್, ಶ್ರೀ ಎಸ್. ಎಲ್. ಹಳದನಕರ್, ಶ್ರೀ ಕೆ.ಆರ್. ಕೇತಕರ್ ಮುಂತಾದವರಾಗಲೀ ಮಾಡಿದುದೂ ಅದನ್ನೇ ಸಾಧಿಸಿದುದೂ ಅದನ್ನೇ. ನವ್ಯತೆಯ ಆವಿಷ್ಕಾರದಲ್ಲಿ ಕೇವಲ ತಂತ್ರಜ್ಞರಾಗಿ ಪರಿವರ್ತನೆಗೊಳ್ಳುತ್ತಿರುವ ಯುವಪೀಳಿಗೆ ಆ ಎಲ್ಲ ಮಹಿಮಾನ್ವಿತಕಲಾವಿದರ ಕಲಾಕೃತಿಗಳಲ್ಲಿ ಅಡಗಿರುವ ಸ್ವಂತಿಕೆ; ಭಾರತೀಯ ಪರಿಶುದ್ಧ ಪರಂಪರೆಯ ಹಿರಿಮೆ-ಗರಿಮೆ, ಜೀವನಾನುಭವ, ಕ್ರೂರಬದುಕನ್ನೂ ಸೌಂದರ್ಯಾನ್ವೇಷಣೆಯ ದೃಷ್ಟಿಯಿಂದ ನೋಡುವ ಹೃದಯ ಸಂವೇದನೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವುದು ಅಗತ್ಯವಾಗಿದೆ. ಈ ಎಲ್ಲ ಕಲಾವಿದರ ಸಮಾಕಾಲೀನರಾದ ಶ್ರೀ ಶಿವಾನಂದ ಅಕ್ಕಿ ಅವರು ಕೇವಲ ನಿಸರ್ಗದೃಶ್ಯ ಚಿತ್ರಗಳನ್ನು ಮಾತ್ರ ಚಿತ್ರಿಸಿದವರಲ್ಲ; ವ್ಯಕ್ತಿ ಚಿತ್ರಗಳು (Portraits), ಚಿತ್ರಸಂಯೋಜನೆಗಳು (Compositions) ಮುಂತಾಗಿ ಅಸಂಖ್ಯ ಚಿತ್ರಕಲಾಕೃತಿಗಳನ್ನು ಅವರು ಚಿತ್ರಿಸಿದ್ದರಾದರೂ ಕೇವಲ ಕೆಲವೇ ನಿಸರ್ಗದೃಶ್ಯ ಚಿತ್ರಗಳನ್ನು ಬಿಟ್ಟರೆ ಉಳಿದ ಯಾವುದೇ ಕಲಾಕೃತಿಯನ್ನು ನೋಡಿ ಸಂತಸಪಡುವ ಭಾಗ್ಯವನ್ನು ಮಾತ್ರ ನಾವು ಪಡೆದಿಲ್ಲ, ಈ ದುರ್ದೆಶೆಗೆ ನಮ್ಮ ದಿವ್ಯ ನಿರ್ಲಕ್ಷ್ಯವೂ ಕಾರಣವಾಗಿರ ಬಹುದು.

ಮುಂಬಯಿಯಲ್ಲಿ ಶ್ರೀ ಶಿವಾನಂದ ಅಕ್ಕಿಯವರು ಪ್ರಾರಂಭಿಸಿದ ಕಲಾಶಾಲೆ ಕೇವಲ ಬೆರಳೆಣಿಕೆಯ ವಿದ್ಯಾರ್ಥಿಗಳಿಂದ ಮಾತ್ರ ನಡೆಯುತ್ತಿತ್ತು. ಸರ್. ಜೆ.ಜೆ. ಕಲಾಶಾಲೆಯಂಥ ಶಾಲೆಯಲ್ಲಿಯೇ ಕೇವಲ ಹತ್ತಾರು ವಿದ್ಯಾರ್ಥಿಗಳು ಮಾತ್ರ ಕಲಾಭ್ಯಾಸ ಮಾಡುತ್ತಿದ್ದ ಆಗಿನ ದಿನಗಳಲ್ಲಿ ಇನ್ನುಳಿದ ಖಾಸಗಿ ಕಲಾಶಾಲೆಗಳ ಅಭಿವೃದ್ಧಿ, ಪ್ರಗತಿಗಳು ಕೇವಲ ಕನಸು; ಗಾಳಿಗೋಪುರ. ಶ್ರೀ ಶಿವಾನಂದ ಅಕ್ಕಿ ಅವರ ಕಲಾಶಾಲೆಯೂ ಈ ಬಳಲಿಕೆಯಿಂದ ಹೊರತಾಗಿರಲಿಲ್ಲ. ಅವರ ಮುಂಬಯಿಯ ದುಬಾರಿ ಜೀವನ, ಗದುಗಿನಲ್ಲಿರುವ ತಾಯಿ, ತಮ್ಮಂದಿರ ಬದುಕು, ತಮ್ಮಂದಿರ ಶಿಕ್ಷಣ ಶಿವಾನಂದರ ಸೀಮಿತ ಅಲ್ಪಸಂಪಾದನೆಯಿಂದಾಗಿ ದುರ್ಭರವಾಗುತ್ತ ಬಂದವು. ಸಿನಿಮಾ ಮುಂತಾದ ವಾಣಿಜ್ಯ ವ್ಯಾಪ್ತಿಯ ಉದ್ಯೋಗಗಳು ಮುಂಬಯಿಯಲ್ಲಿ ಸಾಕಷ್ಟು

ಪ್ರಮಾಣದಲ್ಲಿ ಬೆಳೆದಿರಲಿಲ್ಲವಾಗಿ ಸಂಪಾದನೆಯ ಬೇರೆ ಮೂಲಗಳಿಲ್ಲದೇ ದಿನಗಳೆಯುವುದು ದುಸ್ತರವಾಗತೊಡಗಿತು. ಶಿವಾನಂದ ತಮಗೊದಗಿದ ದುಸ್ಥಿತಿಯನ್ನು ಗುರುಗಳಾದ ರಾವಬಹದ್ದೂರ್ ಎಂ. ವಿ. ಧುರಂಧರ ಅವರ ಹತ್ತಿರ ತೋಡಿಕೊಂಡರು. ಶ್ರೀ ಧುರಂಧರ ಅವರು-

-"ನಿನ್ನ ಕಲಾಶಾಲೆ ಹಾಗೇ ನಡೆಯುತ್ತಿರಲಿ; ನಾನು ನಿನಗಾಗಿ ಬೇರೆಡೆಯಲ್ಲಿ ನೌಕರಿಗೆ ಪ್ರಯತ್ನಿಸುತ್ತೇನೆ. ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳಬೇಡ, ನಿನ್ನ ಹಸನ್ಮುಖ ಸದಾ ಹಸನ್ಮುಖವಾಗಿಯೇ ಇರಲಿ, ನಿನ್ನ ಹಾಸ್ಯ ಪ್ರವೃತ್ತಿ ಮಾಸದಿರಲಿ, ದೇವರಿದ್ದಾನೆ."-ಎಂದು ಹೇಳಿ ಶ್ರೀ ಶಿವಾನಂದರನ್ನು ಸಾಂತ್ವನಗೊಳಿಸಿದರು.

ಕೆಲವು ದಿನಗಳುರುಳಿದವು. ಒಂದುದಿನ ಗುರುಗಳು ಶಿವಾನಂದರನ್ನು ಹತ್ತಿರ ಕರೆದು - "ನಿನಗಾಗಿ ಒಂದು ನೌಕರಿಯನ್ನು ದೊರಕಿಸಿಕೊಡಲು ನಾನು ಸಾಕಷ್ಟು ಪ್ರಯತ್ನಿಸಿದೆ. ನಿನ್ನ ದುರ್ದೈವವೋ ಅಥವಾ ನನ್ನ ದುರ್ದೈವವೋ ನಾನು ನನ್ನ ಪ್ರಯತ್ನದಲ್ಲಿ ಸಫಲನಾಗಲಿಲ್ಲ" -ಎಂದು ಹೇಳಿದರು.

ಶ್ರೀ ಶಿವಾನಂದ ಅಕ್ಕಿ ಅವರಿಗೆ ಮಾನಸಿಕ ಆಘಾತವಾಗಲು ಗುರುಗಳ ಇದೊಂದೇ ಮಾತು ಸಾಕಾಯಿತು. ಗುರುಗಳು ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳಬೇಡ ಎಂದರು; ಶಿವಾನಂದ ಹಚ್ಚಿಕೊಂಡರು. ಗುರುಗಳು ನಿನ್ನ ಹಸನ್ಮುಖ ಸದಾ ಹಸನ್ಮುಖವಾಗಿರಲಿ ಎಂದರು, ಅಂದೇ ಶಿವಾನಂದರ ಹಸನ್ಮುಖ ಬಾಡಿತು. ಗುರುಗಳು ನಿನ್ನ ಹಾಸ್ಯಪ್ರವೃತ್ತಿ ಮಾಸದಿರಲಿ ಎಂದರು, ಅಂದೇ ಶಿವಾನಂದರ ಹಾಸ್ಯ ಪ್ರವೃತ್ತಿ ಮಾಸಿ ಹೋಯಿತು, ಗುರುಗಳು ದೇವರಿದ್ದಾನೆ ಎಂದರು. ಶಿವಾನಂದರಿಗೆ ಮಾತ್ರ ಜೀವನ ಪರ್ಯಂತ ದೇವರು ಇಲ್ಲದೇ ಹೋದ. ಕಾಲನ ಕ್ರೂರ ದೃಷ್ಟಿಯಿಂದಾಗಿ ಶ್ರೀ ಶಿವಾನಂದ ಅಕ್ಕಿ ಅವರು ತಮ್ಮ ಎಂಭತ್ತು ವರುಷಗಳ ದೀರ್ಘಾವಧಿ ಜೀವನದುದ್ದಕ್ಕೂ ಬುದ್ಧಿ ಭ್ರಮಣೆಯನ್ನೇ ಅನುಭವಿಸಬೇಕಾಯಿತು. ಅಂದೇ ಕಲಾಕೃತಿಗಳ ರಚನೆ ಸ್ಥಗಿತಗೊಂಡಿತು. ಈ ಘಟನೆ ಘಟಿಸಿದ್ದು ಸಾವಿರದ ಒಂಭೈನೂರ ಮೂವತ್ತರಲ್ಲಿ. ಭಾರತದ ಟರ್ನರ್ ಗೇನ್ಸಬರೋ ಆಗಬೇಕಿದ್ದ ಶಿವಾನಂದರ ಜೀವನ ದುರಂತ ನಾಯಕನ ಜೀವನವಾಗಿ ಪರ್ಯವಸಾನವಾಯಿತು.

"ಶಿವಾನಂದ ಬುದ್ಧಿಭ್ರಮಣೆಗೊಳಗಾಗಿದ್ದಾನೆ"-ಎಂಬ ಸಮಾಚಾರ ಗದುಗಿನಲ್ಲಿದ್ದ ತಾಯಿ ಮುದುಕಮ್ಮನವರಿಗೂ ತಮ್ಮಂದಿರಾದ ಶ್ರೀ ಟಿ. ಪಿ. ಅಕ್ಕಿ, ಶ್ರೀ ಈಶ್ವರ ಅಕ್ಕಿ ಅವರಿಗೂ ತಲುಪಿತು. ಎಲ್ಲರಿಗೂ ದಿಗ್ಭ್ರಮೆ. ತತ್ಕ್ಷಣವೇ ಎಲ್ಲರೂ ಮುಂಬಯಿಗೆ ಧಾವಿಸಿದರು. ಶ್ರೀ ಶಿವಾನಂದರನ್ನು ಬೆಳಗಾವಿಯ ಸಿವಿಲ್ ಹಾಸ್ಪಿಟಲ್‌ನಲ್ಲಿ ಉಪಚಾರಕ್ಕಾಗಿ ಸೇರಿಸಲಾಯಿತು. ಶಿವಾನಂದ ಅವರು ಬುದ್ಧಿಯ ಹತೋಟಿಯನ್ನು ಕಳೆದುಕೊಳ್ಳದಿರಲೆಂದು ತಾಯಿಯವರೂ ಸಾಕಷ್ಟು ಸಾಂತ್ವನದ ಮಾತುಗಳನ್ನು ಹೇಳಿದರು, ತಮ್ಮಂದಿರೂ ಸಾಕಷ್ಟು ಸಂತೈಸಿದರು, ವೈದ್ಯರೂ ತಮ್ಮೆಲ್ಲ ಮೇಧಾಶಕ್ತಿಯನ್ನೂ ಉಪಯೋಗಿಸಿ ಲಭ್ಯವಾಗಿದ್ದ ಔಷಧೋಪಚಾರ ಮಾಡಿದರು. ಎಲ್ಲವೂ ವ್ಯರ್ಥವಾಯಿತು. ಶ್ರೀ ಶಿವಾನಂದರ ಬುದ್ಧಿ ಸ್ತಿಮಿತಕ್ಕೆ ಬರಲೇ ಇಲ್ಲ. ಅಕ್ಕಿ ಅವರ ಕುಟುಂಬದ ಮೇಲೆ ಬಲವಾದ ಬಿರುಗಾಳಿ ಬೀಸಿತು; ಬರಸಿಡಿಲು ಬಡಿಯಿತು ತಮ್ಮಂದಿರಾದ ಶ್ರೀ ಟಿ. ಪಿ. ಅಕ್ಕಿ ಮತ್ತು ಶ್ರೀ ಈಶ್ವರಪ್ಪ ಅಕ್ಕಿ ನಿರುಪಾಯರಾಗಿ ಬದುಕಿನ ಸಮಸ್ಯೆಯನ್ನು ಎದುರಿಸಲು ಸನ್ನದ್ಧರಾದರು. ದುಃಖತಪ್ತ ತಾಯಿಗೆ ಭರವಸೆಯ ಬದುಕನ್ನೇ ಬದುಕುವ ಭರವಸೆಯನ್ನು ಕೊಟ್ಟರು. ಕಾಲೇಜು ಶಿಕ್ಷಣವನ್ನು ಅರ್ಧಕ್ಕೇ ಬಿಟ್ಟು ನವಸಾರಿ, ವಸಯಿ ಮುಂತಾದ ಅನ್ಯಭಾಷಾ ಪ್ರದೇಶಗಳಲ್ಲಿ ಸಿಕ್ಕ ನೌಕರಿ ಮಾಡತೊಡಗಿದರು.

ಈ ಮಧ್ಯೆ ಶ್ರೀ ಟಿ. ಪಿ. ಅಕ್ಕಿ ಹಾಗೂ ಶ್ರೀ ಈಶ್ವರ ಅಕ್ಕಿ ಅವರು ನೌಕರಿಗಾಗಿ ಅಲೆದಾಡಬೇಕಾಗಿ ಬಂದದ್ದರಿಂದ ಅಣ್ಣ ಶ್ರೀ ಶಿವಾನಂದ ಅವರ ಕಲಾಕೃತಿಗಳನ್ನೆಲ್ಲ ಬಿಜಾಪುರದಲ್ಲಿದ್ದ ಶ್ರೀ ಎ. ಸಿ. ಅಂಗಡಿಯವರ ಮನೆಯಲ್ಲಿಟ್ಟಿದ್ದರು. ಸಾವಿರದ ಒಂಭೈನೂರ ಮೂವತ್ತೊಂದರಿಂದ ಸುಮಾರು ಹತ್ತು ಹನ್ನೆರಡು ವರುಷಗಳ ಅವಧಿಯಲ್ಲಿ ಶ್ರೀ ಅಂಗಡಿಯವರ ಮನೆಯಲ್ಲಿದ್ದ ಶಿವಾನಂದರಿಂದ ರಚಿತವಾದ ಅಮೌಲ್ಯ ಕಲಾಕೃತಿಗಳೆಲ್ಲ ಗೆದ್ದಲು ಹಿಡಿದು ಹಾಳಾಗಿ ಹೋದವು. ನವಸಾರಿ ವಸಯಿಗಳಲ್ಲಿ ನೌಕರಿ ಮಾಡುತ್ತಲೇ ಸರ್. ಜೆ. ಜೆ ಕಲಾಶಾಲೆಯಿಂದ ಶ್ರೀ ಟಿ. ಪಿ. ಅಕ್ಕಿಯವರು ಆರ್ಟ್‌ಮಾಸ್ಟರ್ ಪರೀಕ್ಷೆಯನ್ನೂ ಶ್ರೀ ಈಶ್ವರ ಅಕ್ಕಿಯವರು ಡ್ರಾಯಿಂಗ್ ಟೀಚರ್ಸ್‌ಕೋರ್ಸ್ ಪರೀಕ್ಷೆಯನ್ನೂ ಮುಗಿಸಿಕೊಂಡು ಗದುಗಿಗೆ ಮರಳಿ ಬಂದರು.

ಶ್ರೀ ಶಿವಾನಂದ ಅಕ್ಕಿಯವರ ಸಂಪೂರ್ಣ ಕುಟುಂಬದ ಚರಿತ್ರೆಯನ್ನು ಬರೆದಾಗಲೇ ಶಿವಾನಂದರ ಜೀವನ ಪರಿಚಯ ಪೂರ್ಣವಾಗುತ್ತದೆ. ಮುಂಬಯಿಯ ವಾಸವನ್ನು ಮುಗಿಸಿಕೊಂಡು ಗದುಗಿಗೆ ಮರಳಿಬಂದ ಶ್ರೀ ಟಿ. ಪಿ. ಅಕ್ಕಿಯವರು ಗದುಗಿನ ಮುನಿಸಿಪಲ್ ಹಾಯಸ್ಕೂಲಿನಲ್ಲಿಯೂ ಶ್ರೀ ಈಶ್ವರ ಅಕ್ಕಿ ಅವರು ಗದುಗಿನ ಮುನಿಸಿಪಲ್ ಸ್ಕೂಲಬೋರ್ಡನವರು ನಡೆಸುತ್ತಿದ್ದ ಪ್ರಾಥಮಿಕ ಶಾಲೆಗಳಲ್ಲಿಯೂ ಚಿತ್ರಕಲಾ ಶಿಕ್ಷರಾಗಿ ಸೇವೆಗೆ ತೊಡಗಿದರು. ಉಪಜೀವನದ ಸಮಸ್ಯೆ ತತ್ಕಾಲ ಇಲ್ಲದಂತಾಯಿತು. ಶಾಲೆಯಿಂದ ಮರಳಿ ಮನೆಗೆ ಬಂದಾಗ ಎದುರಿಗೆ ನಿಂತ ಹುಚ್ಚು ಹಿಡಿದ ಅಣ್ಣ ಶಿವಾನಂದರನ್ನು ಕಂಡಾಗ ಸಹೋದರರಿಬ್ಬರಿಗೂ ಕರುಳು ಹಿಸುಕಿದ ಅನುಭವವಾಗುತ್ತಿತ್ತು, ಮೌನವಾಗಿಯೇ ಮನೆಯೊಳಕ್ಕೆ ಹೋಗಿ ಮೌನವಾಗಿಯೇ ಊಟಮಾಡುತ್ತಿದ್ದರು. ಮೌನವಾಗಿಯೇ ಮರಳಿ ಶಾಲೆಗೆ ಹೋಗುತ್ತಿದ್ದರು. ಮಕ್ಕಳ ಚರ್ಯೆಯನ್ನು ಮೌನವಾಗಿಯೇ ಗಮನಿಸುತ್ತಿದ್ದ ತಾಯಿ ಮುದುಕಮ್ಮ ಮನದಲ್ಲಿಯೇ ಕೊರಗಿ ಕರಗುತ್ತಿದ್ದರು; ಮತ್ತೆ ಗಟ್ಟಿಯಾಗುತ್ತಿದ್ದರು. ನೋವನ್ನು ಹತ್ತಿಕ್ಕಿಕೊಂಡು ಧೈರ್ಯ ಸ್ಥೈರ್ಯಗಳಿಂದ ಬದುಕನ್ನು ಎದುರಿಸುವಂತೆ ಮಕ್ಕಳನ್ನು ಪ್ರಚೋದಿಸುತ್ತಿದ್ದರು. ಶಿವಾನಂದನಂತೆ ಉಳಿದ ಮಕ್ಕಳಾರೂ ಮಾನಸಿಕವಾಗಿ ಕ್ಷೀಣಿಸದಂತೆ ಸದಾಜಾಗ್ರತ ರಾಗಿರುತ್ತಿದ್ದರು.

ದಿನಗಳುರುಳುತ್ತಲೇ ಶ್ರೀ ಟಿ. ಪಿ. ಅಕ್ಕಿ ಅವರು ಸೋದರ ಶ್ರೀ ಈಶ್ವರ ಅಕ್ಕಿಯವರನ್ನು ಕರೆದು ಹೇಳಿದರು-

''ಅಣ್ಣನ ಆಶೆ-ಆಕಾಂಕ್ಷೆಗಳೆಲ್ಲ ಇಲ್ಲಿಗೇ ಕಮರಿ ಹೋಗಬೇಕೇ? ಅದಕ್ಕಾಗಿ ನಾವೇನು ಮಾಡಲೂ ಸಾಧ್ಯವಿಲ್ಲವೇ? ಲೌಕಿಕವಾಗಿ ಹುಚ್ಚನೆಂದೆನ್ನಿಸಿದ ಅಣ್ಣನವರ ಜಾಗೃತ ಅಂತರಾತ್ಮ ಪರಿತಪಿಸುವದಂತೂ ನಿಶ್ಚಿತ. ಆ ಪವಿತ್ರಾತ್ಮನ ಅಂತಃಶಾಂತಿಗೆ ನಾವು ಏನನ್ನಾದರೂ ಮಾಡಲೇಬೇಕು.''-ಎಂದರು.

-''ಹೌದು. ಚಿತ್ರಕಲಾ ಶಾಲೆಯನ್ನು ಪ್ರಾರಂಭಿಸಿ ತನ್ಮೂಲಕ ನಾಡಿನ ಚಿತ್ರಕಲಾಸಕ್ತ ವಿದ್ಯಾರ್ಥಿಗಳಿಗೆ ಚಿತ್ರಕಲಾವಿದ್ಯಾದಾನ ಮಾಡುವುದೇ ಅಣ್ಣನವರ ಮಹತ್ವಾಕಾಂಕ್ಷೆಯಾಗಿತ್ತಲ್ಲವೇ? ಅವರು ಮುಂಬಯಿಯಲ್ಲಿ ಪ್ರಾರಂಭಿಸಿದ ಕಲಾಶಾಲೆಯಂತೂ ಮುಚ್ಚಿಹೋಯಿತು. ಅವರ ಆಶೆಯಂತೆ ಇಲ್ಲಿಯೇ

ಗದುಗಿನಲ್ಲಿಯೇ ಕಲಾಶಾಲೆಯೊಂದನ್ನು ನಾವೇ ಏಕೆ ಪ್ರಾರಂಭಿಸ ಬಾರದು? ಇದರಿಂದ ನಮ್ಮ ಕರ್ನಾಟಕದ (ಆಗ ಬೆಳಗಾಂವ, ಬಿಜಾಪುರ, ಧಾರವಾಡ ಮತ್ತು ಕಾರವಾರ ಜಿಲ್ಲೆಗಳನ್ನು ಮಾತ್ರ ಕರ್ನಾಟಕವೆಂದು ಕರೆಯಲಾಗುತ್ತಿತ್ತು. ಉಳಿದೆಲ್ಲ ಜಿಲ್ಲೆಗಳು ಹಳೆಯ ಮೈಸೂರು ಸಂಸ್ಥಾನದಲ್ಲಿಯೂ, ಹೈದರಾಬಾದ ಸಂಸ್ಥಾನದಲ್ಲಿಯೂ, ಮದ್ರಾಸ ಪ್ರಾಂತದಲ್ಲಿಯೂ ಸೇರಿ ಹೋಗಿದ್ದವು. ಆಗ ಭಾರತದ ಬಹುಭಾಗ ಬ್ರಿಟಿಷ್ ಪ್ರಭುತ್ವಕ್ಕೆ ಒಳಗಾಗಿತ್ತು. ಕನ್ನಡ ನಾಡು ಹರಿದು ಹಂಚಿ ಹೋಗಿತ್ತು) ಕಲಾವಿದ್ಯಾರ್ಥಿಗಳ ಕಲಾಜೀವನಕ್ಕೊಂದು ಆಶಾದೀಪ ದೊರೆಯುತ್ತದೆ; ನೀವಂದಂತೆ ಅಣ್ಣನವರ ಅಂತರಾತ್ಮಕ್ಕೆ ಆನಂದವೂ ಲಭ್ಯವಾಗುತ್ತದೆ. ಹೇಗಿದ್ದರೂ ಕಲಾಶಾಲೆಯನ್ನು ಪ್ರಾರಂಭಿಸಲು ಅವಶ್ಯಕವಾದ "ಆರ್ಟ್‌ಮಾಸ್ಟರ್" ಪದವಿಯನ್ನೂ ನೀವುಗಳಿಸಿದ್ದೀರಿ"

-ಶ್ರೀ ಈಶ್ವರಪ್ಪನವರು ಅಣ್ಣ ಶ್ರೀ ಟಿ. ಪಿ. ಅಕ್ಕಿಯವರೆದುರು ತಮ್ಮ ಅಭಿಪ್ರಾಯವನ್ನು ಮಂಡಿಸಿದರು.

-"ಧಾರವಾಡದಲ್ಲಿ ಶ್ರೀ ಡಿ. ವಿ. ಹಾಲಭಾವಿಯವರು ಈಗಾಲೇ ಕಲಾ ಶಾಲೆಯೊಂದನ್ನು ಪ್ರಾರಂಭಿಸಿಯಾಗಿದೆಯಲ್ಲ!"

-ಶ್ರೀ ಟಿ. ಪಿ. ಅಕ್ಕಿ ತಮಗಿರುವ ಸಂದೇಹ ಆತಂಕಗಳನ್ನು ವ್ಯಕ್ತಪಡಿಸಿದರು.

-"ಆದರೇನಾಯಿತು? ಹಾಲಭಾವಿಯವರ ಶಾಲೆಯೂ ಇರಲಿ, ನಮ್ಮದೂ ಇರಲಿ. ಕನ್ನಡ ಕಲಾವಿದ್ಯಾರ್ಥಿಗಳ ಸಂಖ್ಯೆಗೆ ಬಡತನವೆಂಬುದಿಲ್ಲ. ಇರಲಿ ಅದೂ ಇರಲಿ, ಇದೂ ಇರಲಿ"

ಶ್ರೀ ಟಿ. ಪಿ. ಅಕ್ಕಿಯವರಿಗೆ ಸಹೋದರರ ಅಭಿಪ್ರಾಯ ಸರಿ ಎನಿಸಿತು ಅವರು ದೃಢ ಮನಸ್ಕರಾಗಿ ಹೇಳಿದರು-

-"ನಮಗಂತೂ ಸಧ್ಯ ಉಪಜೀವನದ ಸಮಸ್ಯೆಯಿಲ್ಲ. ಎಷ್ಟೆ ವಿದ್ಯಾರ್ಥಿಗಳು ಬರಲಿ ಅಣ್ಣನ ನೊಂದ ಅಂತರಾತ್ಮಕ್ಕೆ ಶಾಂತಿ, ಸಮಾಧಾನ, ನೆಮ್ಮದಿಗಳಂತೂ ಸಿಕ್ಕಲೇಬೇಕು. ಅದಕ್ಕಾಗಿ ನಮ್ಮ ಸಂಪೂರ್ಣ ಬದುಕನ್ನೇ ಬೇಕಾದರೆ ಬಲಿಕೊಡೋಣ."

ಶ್ರೀ ಟಿ.ಪಿ. ಅಕ್ಕಿ ಅವರು ತಮ್ಮ ಸಹೋದ್ಯೋಗಿಗಳೊಂದಿಗೂ



3. ಭಾವಚಿತ್ರ
Portrait



4. ಗುಹೆ, ಮುಂಬಯಿ
Cave, Bombay



5. ಸ್ಕೆಚ್
Sketch



ಭಾವಚಿತ್ರ
Portrait



6. ಪ್ರಕೃತಿ ಚಿತ್ರ
Landscape



7. ಗೋಲ್‌ಗುಂಬಜ್ ಇನ್ ಮೂನ್‌ಲೈಟ್
Golgumbaz in Moonlight



8. ಸಮುದ್ರ ದೃಶ್ಯ - ಮುಂಬಯಿ
Seascape - Bombay



9. ಪ್ರಕೃತಿಚಿತ್ರ - ಹುಬ್ಬಳ್ಳಿ
Landscape - Hubli



10) ಪ್ರಕೃತಿಚಿತ್ರ - ಧಾರವಾಡ
Landscape - Dharwad



14)  14 ರಿಂದ 16 ರವರೆಗಿನ ಚಿತ್ರಗಳು ಬುದ್ಧಿ
ಭ್ರಮಣೆಯ ಪ್ರಾರಂಭ ಕಾಲದ ಚಿತ್ರಗಳು

ಸ್ನೇಹಿತರೊಂದಿಗೂ ವಿಷಯವನ್ನು ಪ್ರಸ್ತಾಪಿಸಿದರು. ಎಲ್ಲರದೂ ಒಂದೇ ಅಭಿಪ್ರಾಯ-

"ಗದುಗಿನಲ್ಲಿ ಕಲಾಶಾಲೆ ಪ್ರಾರಂಭವಾಗಲೇಬೇಕು. ಶ್ರೀ ಶಿವಾನಂದರಿಗಿದ್ದ ಆಶೆ-ಆಕಾಂಕ್ಷೆಗಳು ಈ ಮೂಲಕ ಪರಿಪೂರ್ಣಗೊಳ್ಳಬೇಕು. ಶಿಬಿ ಚಕ್ರವರ್ತಿಯು ಕಪೋತನ ಪ್ರಾಣವನ್ನುಳಿಸಲು ಗರುಡನಿಗೆ ತನ್ನ ತೊಡೆಯ ಮಾಂಸವನ್ನೇ ಕತ್ತರಿಸಿ ದಾನಮಾಡಿದ ಪುಣ್ಯ ಪರಸರದ ಊರು ಗದಗು. ಜನಮೇಜಯ ಮಹಾರಾಜನು ಸರ್ಪಯಾಗವನ್ನು ಮಾಡಿದ ಪುಣ್ಯಕ್ಷೇತ್ರ ಗದಗು. ಹುಟ್ಟುಗುರುಡರಾದ ಉಭಯ ಗಾನ ವಿಶಾರದ, ಪಂಡಿತ ಪಂಚಾಕ್ಷರ ಗವಯಿಗಳು ತನ್ನಂತೆಯೇ ಜನ್ಮಾಂಧರಾದ ಸಾವಿರಾರು ಮಕ್ಕಳಿಗೆ ಸಂಗೀತ ವಿದ್ಯಾದಾನ ಮಾಡಿದ ಕ್ಷೇತ್ರ ಗದಗು . ಗದುಗಿನ ಭಾರತವೆಂದೇ ಕರೆಯಲ್ಪಡುವ ಕರ್ಣಾಟಕ ಭಾರತ ಕಥಾ ಮಂಜರಿ ಎಂಬ ಮಹಾಕಾವ್ಯವನ್ನು ಕುಮಾರ ವ್ಯಾಸಕವಿ ರಚಿಸಿದ್ದು ಗದುಗು. ಎಲ್ಲಕ್ಕೂ ಮಿಗಿಲಾಗಿ ಸದಾ ಜಾಗೃತನಾಗಿರುವ ಭಕ್ತವತ್ಸಲ ಶ್ರೀ ವೀರನಾರಾಯಣನ ಆವಾಸಸ್ಥಾನ ಗದಗು. ಸಿದ್ಧಪುರುಷ ಶ್ರೀ ತೋಂಟದ ಸಿದ್ಧಲಿಂಗಯತಿಗಳ ಕೃಪಾಶೀರ್ವಾದಗಳಿಂದ ಸದಾ ಉಲ್ಲಾಸ, ಉತ್ಸಾಹಗಳು ಚಿಮ್ಮುತ್ತಿರುವ ನವನವೋನ್ಮೇಷ ಶಾಲಿಯಾದ ಪರಮ ಪುಣ್ಯಪರಂಪರೆಯ ಸಾಲಿಗೆ ಚಿತ್ರಕಲಾ ಶಾಲೆಯೂ ಒಂದು ಸೇರಲೇಬೇಕು."

ಶ್ರೀ ಟಿ. ಪಿ. ಅಕ್ಕಿ ಅವರು ಪ್ರಫುಲ್ಲಿತರಾದರು. ಸ್ನೇಹಿತರ, ಸಹೋದ್ಯೋಗಿಗಳ ಗದುಗಿನ ಸಿರಿವಂತ ಹೃದಯವಂತರ ಸಹಾಯ ಸಹಕಾರಗಳಿಂದ ಸಾವಿರದ ಒಂಬೈನೂರ ನಲವತ್ತೇಳರಲ್ಲಿ ಗದಗಿನಲ್ಲಿ "ವಿಜಯ ಕಲಾ ಮಂದಿರ" ಎಂಬ ಕಲಾಶಾಲೆಯನ್ನು ಪ್ರಾರಂಭಿಸಿಯೇ ಬಿಟ್ಟರು. ಕೇವಲ ಐದು ವಿದ್ಯಾರ್ಥಿಗಳನ್ನುಳ್ಳ ಈ ಕಲಾಶಾಲೆ ಪ್ರಾರಂಭವಾದದ್ದು ಗದುಗಿನ ಮುನಿಸಿಪಲ್ ಹಾಯಸ್ಕೂಲಿನ ಡ್ರಾಯಿಂಗ ತರಗತಿಗಳು ನಡೆಯುವ ದೊಡ್ಡ ಕೊಠಡಿಯಲ್ಲಿ. ಇಂದು ವಿಜಯ ಕಲಾಮಂದಿರವೊಂದು ಬೃಹದ್ ಸಂಸ್ಥೆಯಾಗಿ ಬೆಳೆದಿದೆ. ರಾಜ್ಯಮಟ್ಟದ, ರಾಷ್ಟ್ರಮಟ್ಟದ ಕಲಾವಿದರನ್ನು ಉತ್ಪಾದಿಸಿದೆ. ಕರ್ನಾಟಕ ರಾಜ್ಯದ ಮುಕ್ಕಾಲು ಪ್ರದೇಶದ ಶಾಲೆ, ಕಾಲೇಜುಗಳಲ್ಲಿ ಗದುಗಿನ ವಿಜಯ ಕಲಾಮಂದಿರದಲ್ಲಿಯೇ ಕಲಿತು ಹೊರಬಂದ ಶಿಕ್ಷಕ ವೃಂದವಿದೆ. ಸರಕಾರೀ ಹುದ್ದೆಗಳಲ್ಲಿ, ವೈದ್ಯಕೀಯ ಶಿಕ್ಷಣ ಸಂಸ್ಥೆಗಳಲ್ಲಿರುವ ಅನೇಕ ಕಲಾವಿದರು ವಿಜಯಕಲಾಮಂದಿರದ ಹಳೆಯ ವಿದ್ಯಾರ್ಥಿಗಳೇ ಆಗಿದ್ದಾರೆ. ಶ್ರೀ ಶಿವಾನಂದ ಅಕ್ಕಿ ಅವರು

ಭ್ರಮಿತರಾದದ್ದರಿಂದ ಕಲಾಪೂರ್ಣವಾಗಬೇಕಿದ್ದ ಅವರ ಬದುಕು ಅಪೂರ್ಣವಾದರೂ ಅದನ್ನು ಪರಿಪೂರ್ಣಗೊಳಿಸಿದ ಶ್ರೇಯಸ್ಸು ಶ್ರೀ ಟಿ . ಪಿ. ಅಕ್ಕಿ ಅವರಿಗೆ ಸಲ್ಲುತ್ತದೆ.

ಶ್ರೀ ಶಿವಾನಂದ ಅಕ್ಕಿ ಅವರು ಅಂದು ಚಿತ್ರಕಲಾ ಶಿಕ್ಷಣಕ್ಕೆಂದೇ ಮುಂಬಯಿಗೆ ಹೋಗದಿದ್ದಲ್ಲಿ ಇಂದಿನ ಉತ್ತರ ಕರ್ನಾಟಕ ಚಿತ್ರಕಲಾ ಶಿಕ್ಷಣದ ಕೊರತೆಯಿಂದಾಗಿ ಬಳಲಬೇಕಾಗುತ್ತಿತ್ತೆಂಬುದು ಅನೇಕ ಶಿಕ್ಷಣವೇತ್ತರ ಸ್ಪಷ್ಟ ಅಭಿಮತವಾಗಿದೆ. ಶಿವಾನಂದರು ಮನೆಯಲ್ಲಿ ಬಿತ್ತಿದ ಬೀಜ ಮೊಳಕೆಯೊಡೆದು ಗಿಡವಾಗಿ, ಮರವಾಗಿ, ಹೆಮ್ಮರವಾಗಿ, ಪ್ರತಿಫಲಿತವಾಗಿದೆ. ಶ್ರೀ ಟಿ. ಪಿ. ಅಕ್ಕಿ ಅವರ ಮಕ್ಕಳಾದ ಶ್ರೀ ವಸಂತ ಟಿ. ಅಕ್ಕಿ, ಶ್ರೀ ರಮೇಶ ಟಿ. ಅಕ್ಕಿ, ಶ್ರೀ ಅರವಿಂದ ಟಿ. ಅಕ್ಕಿ ಹಾಗೂ ಶ್ರೀ ಅಶೋಕ ಟಿ. ಅಕ್ಕಿ ಎಲ್ಲರೂ ಕಲಾವಿದರು. ಶ್ರೀ ಅಶೋಕ ಅಕ್ಕಿ ಅವರು ರಾಷ್ಟ್ರೀಯ ಪುರಸ್ಕಾರ ಪಡೆದು ಗ್ರಾಫಿಕ್ ಕಲಾಕ್ಷೇತ್ರದಲ್ಲಿ ಎತ್ತರಕ್ಕೆ ಬೆಳಯಬಲ್ಲ ಭರವಸೆಯ ಯುವಕಲಾವಿದರೆಂದು ಈಗಾಗಲೇ ತಮ್ಮ ಸ್ಥಾನವನ್ನು ಭದ್ರ ಪಡಿಸಿಕೊಂಡಿದ್ದಾರೆ. ಶ್ರೀ ಟಿ. ಪಿ. ಅಕ್ಕಿ ಅವರ ಇಡೀ ಕುಟುಂಬ ಕಲಾಪ್ರಪಂಚಕ್ಕೆ ತನ್ನನ್ನು ಸಮರ್ಪಿಸಿಕೊಂಡಿದೆ. ಶ್ರೀ ಶಿವಾನಂದ ಅಕ್ಕಿ ಚಿತ್ರಕಲಾವಿದರಾಗದೇ ಹೋಗಿದ್ದ ಪಕ್ಷದಲ್ಲಿ ಶ್ರೀ ಟಿ. ಪಿ. ಅಕ್ಕಿಯವರಾಗಲೀ ಶ್ರೀ ಈಶ್ವರ ಅಕ್ಕಿಯವರಾಗಲೀ ಖಂಡಿತವಾಗಿಯೂ ಚಿತ್ರಕಲಾ ಪ್ರಪಂಚಕ್ಕೆ ಕಾಲಿರಿಸುತ್ತಿರಲಿಲ್ಲ. ಗದುಗಿನಲ್ಲಿ ಇಂದು ಕಲಾಶಾಲೆಯೂ ಇರುತ್ತಿರಲಿಲ್ಲ; ಉತ್ತರ ಕರ್ನಾಟಕದಲ್ಲಿ ಕಲಾವಿದರ ಕಲಾಶಿಕ್ಷಣದ ಕ್ರಾಂತಿಕಾರಿ ಪ್ರಗತಿಯೂ ಆಗುತ್ತಿರಲಿಲ್ಲ. ಅವರು ಸರಕಾರದ ಇನ್ನಾವುದೋ ಇಲಾಖೆಯಲ್ಲಿ ಅಧಿಕಾರಿಗಳಾಗಿ ಸೀಮಿತ ಬದುಕನ್ನು ಬದುಕುತ್ತಿದ್ದರೆಂದೇ ಹೇಳಬೇಕು.

ತಾಯಿ ಮುದುಕಮ್ಮನ ಎರಡನೆಯ ಮಗ ಶಿವಾನಂದ ಮಾನಸಿಕ ಆಘಾತಕ್ಕೆ ಬಲಿಯಾಗಿ ತಮ್ಮ ಕಣ್ಣೆದುರಿಗಿದ್ದರೂ ಉಳಿದಿಬ್ಬರು ಮಕ್ಕಳ ಅಭ್ಯುದಯಗಳನ್ನು ಕಂಡು, ತೊಂಭತ್ತು ವರ್ಷಗಳ ತಮ್ಮ ಜೀವನದುದ್ದಕ್ಕೂ ಸಂತೋಷವನ್ನೇ ಅನುಭವಿಸಿ ತಮ್ಮ ಇಹವನ್ನು ತೊರೆದ ಹಿರಿಯ ಜೀವ. ಪತಿಯ ಆಶೆಯಂತೆ ತನ್ನ ಮಕ್ಕಳು ಸುಶಿಕ್ಷಿತರಾದರು, ಗುಣವಂತರಾದರು, ಬಹುಜನಕ್ಕೆ ಬೇಕಾದ ವ್ಯಕ್ತಿಗಳಾದರು ಎಂಬ ತೃಪ್ತಿ ಮುದುಕಮ್ಮನವರಿಗೆ.

